

# ವಿಶ್ವದ ಮಕ್ಕಳ ಸ್ಥಿತಿಗತಿಗಳು 1994



UNITED NATIONS CHILDREN'S FUND
(UNICEF)

# ವಿಶ್ವದ ಮಕ್ಕಳ ಸ್ಥಿತಿಗತಿಗಳು 1994

## ಅಧಿಕೃತ ಸಾರಾಂಶ

*ಯೂನಿಸೆಫ್-ನ ಕಾರ್ಯನಿರ್ವಾಹಕ ನಿರ್ದೇಶಕ ಜೇಮ್ಸ್ ಪಿ. ಗ್ರ್ಯಾಂಟ್ ಅವರು ನೀಡಿರುವ, ವಿಶ್ವದ ಮಕ್ಕಳ ಸ್ಥಿತಿಗತಿಗಳ ವರದಿ-1994-ರ ಸಾರಾಂಶ.*

---

ಅಭಿವೃದ್ಧಿಶೀಲ ದೇಶಗಳಲ್ಲಿನ ಈಗಿನ ಸಂಗತಿಗಳನ್ನು, ಈಗಿನ ವಿದ್ಯಮಾನಗಳನ್ನು, ಬರೀ ಸುದ್ದಿ-ಸಮಾಚಾರಗಳಿಂದ ಅರಿಯಲು ಪ್ರಯತ್ನಿಸದೆ, ಇತಿಹಾಸದ ಭೂತಕನ್ನಡಿ ಹಿಡಿದು ನೋಡಿದಲ್ಲಿ, ವಿಶ್ವದ ಮಕ್ಕಳ ಪಾಲಿಗೆ ಘಾತಕವಾದ ರೋಗಗಳ ವಿರುದ್ಧದ ಸಮರದ ಅಂತಿಮ ಘಟ್ಟ, ಅಂತಿಮ ಆಕ್ರಮಣದ ಆರಂಭಕ್ಕೆ ಎಲ್ಲವೂ ಸಜ್ಜಾಗಿರುವಂತೆ ಕಂಡುಬರುತ್ತದೆ. ವಿಶ್ವದಲ್ಲಿ, ಈಗ ಪ್ರತೀ ವರ್ಷ 80 ಲಕ್ಷ ಮಕ್ಕಳನ್ನು ಬಲಿ ತೆಗೆದುಕೊಳ್ಳುತ್ತಿರುವ, ಮತ್ತು, ಅದೆಷ್ಟೋ ಲಕ್ಷ ಮಕ್ಕಳ ಅನಾರೋಗಕ್ಕೆ, ಹಾಗೂ, ಅದೆಷ್ಟೊ ಮಕ್ಕಳ ಬೆಳವಣಿಗೆ ಕುಂಠಿತಗೊಳ್ಳುವುದಕ್ಕೆ, ಕಾರಣವಾದ ಐದು ರೋಗಗಳ ವಿರುದ್ಧ, ಸಮರ ನಡೆಯುತ್ತಿದೆ. ಶೈಶವದಲ್ಲಿನ ದೌರ್ಬಲ್ಯ-ಅಶಕ್ತಿಗೆ ಕಾರಣವಾಗಿರುವ, ಮತ್ತು ಅದೆಷ್ಟೋ ಮಕ್ಕಳು ಕಿವುಡರು, ಕುರುಡರು ಹಾಗೂ ಮಂದ ಬುದ್ಧಿಯವರಾಗುವುದಕ್ಕೆ, ಇಲ್ಲವೆ, ನರಗಳ ದೌರ್ಬಲ್ಯ-ಪಾರ್ಶ್ವವಾಯುವಿಗೆ ಒಳಗಾಗುವುದಕ್ಕೆ ಕಾರಣವಾಗಿರುವ ಸಾಂಕ್ರಾಮಿಕ ರೋಗಗಳು ಮತ್ತು ಸೂಕ್ಷ್ಮ ಪೋಷಕಾಂಶಗಳ ಕೊರತೆಯ ಸಮಸ್ಯೆಗಳು ಸಹ ಈಗ ಹಿಮ್ಮೆಟ್ಟ ತೊಡಗಿವೆ.

ಇತ್ತೀಚಿನ ವರ್ಷಗಳಲ್ಲಿ ಸಂಭವಿಸಿದ ವಿಪತ್ತುವಿನಾಶಗಳಿಗೆ ದೊರೆಯುತ್ತಿರುವ ಪ್ರಚಾರದಲ್ಲಿ, ಸೀಮಿತವಾದ ಈ ಸತ್ಯ ಸಂಗತಿ, ಒಳ್ಳೆಯ ಈ ಸುದ್ದಿ, ಹೇಳದ-ಕೇಳದ ಕತೆಯಾಗಿ ಉಳಿದಿದೆ.

ಕೆಟ್ಟ ಮಾತು, ಕೆಟ್ಟ ಸುದ್ದಿ-ಸಂಗತಿಗಳು ಕಾಡ್ಗಿಚ್ಚಿನಂತೆ ಹರಡುತ್ತವೆ. ಕಡು ಬಡತನ, ದಾರಿದ್ರ್ಯ, ಶೋಷಣೆ, ಮತ್ತು ಕೆಲಸದ ಸ್ಥಳದಲ್ಲಿ ಯುದ್ಧದ ಸಮಯದಲ್ಲಿ, ರಸ್ತೆಗಳಲ್ಲಿ ಹಾಗೂ ಮನೆಗಳಲ್ಲಿ ತೀರ ಅಮಾನವೀಯವಾದ ರೀತಿಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದು- ಇವೇ ಮುಂತಾದ ಸಮಸ್ಯೆಗಳಿಂದಾಗಿ, ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಹೊಂದುತ್ತಿರುವ ದೇಶಗಳಲ್ಲಿನ ಲಕ್ಷಾಂತರ ಮಕ್ಕಳು-ಯುವ ಜನರು, ಸಂಕಷ್ಟಕ್ಕೆ ಈಡಾಗಿದ್ದಾರೆ. ಆದಾಗಲು ಸಹ, ಯೂನಿಸೆಫ್, ಅಧಿಕ ಸಂಖ್ಯಾತ ಮಕ್ಕಳ ಬಾಳಿನಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಹೆಚ್ಚಿನ ಮಹತ್ವನೀಡುವ ತನ್ನ ಸತ್‌ಸಂಪ್ರದಾಯಗಳ ಮೇರೆಗೆ, 1994 ನೆಯ ಸಾಲಿನ ವಿಶ್ವದ ಮಕ್ಕಳ ಸ್ಥಿತಿಗತಿಗಳ ವರದಿಯಲ್ಲಿ, ವಿಶ್ವದ ಅತ್ಯಂತ ಬಡ ಜನ ಸಮುದಾಯಗಳಿಗೆ ಸೇರಿದ ಮಕ್ಕಳ ಆರೋಗ್ಯ ಮತ್ತು ಪೋಷಣೆಗೆ ಅಪಾಯಕಾರಿಯಾಗಿರುವ, ಹಲವು ನಿರ್ದಿಷ್ಟ ವಿಷಯಗಳಲ್ಲಿ ಸಾಧಿಸಲಾಗಿರುವ ಪ್ರಗತಿಗೆ ಹೆಚ್ಚಿನ ಒತ್ತು ನೀಡಿದೆ.

ವಿಶ್ವದಲ್ಲಿ ಅಲ್ಲಲ್ಲಿ ನಡೆಯುತ್ತಿರುವ ಹೋರಾಟ ಯುದ್ಧಗಳಲ್ಲಿ ಮತ್ತು ಕ್ಷಾಮದಲ್ಲಿ ಸಾಯುತ್ತಿರುವವರ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯ ಮಕ್ಕಳು, ಪ್ರತೀ ವರ್ಷ ದಡಾರವೊಂದರಿಂದಲೇ

ಸಾಯುತ್ತಿದ್ದಾರೆ. ಆದರೆ, ಇದೀಗ ಈ ರೋಗದ ಪ್ರಾಬಲ್ಯ-ಹಿಡಿತ ತಗ್ಗತೊಡಗಿದೆ. 1980-ರಲ್ಲಿ, ಘಾತಕವಾದ ದಡಾರದಿಂದಾಗಿ ಅಸುನೀಗುತ್ತಿದ್ದ ಮಕ್ಕಳ ಸಂಖ್ಯೆ ವರ್ಷಕ್ಕೆ 25 ಲಕ್ಷವಾಗಿದ್ದುದು, ಈಗ, ವರ್ಷಕ್ಕೆ 10 ಲಕ್ಷಕ್ಕೆ ಇಳಿದಿದೆ. ಇದೇ ಸಮಯದಲ್ಲಿ ದಡಾರವಾಗಿ ಸಾಯದೆ ಉಳಿದ ಮಕ್ಕಳಲ್ಲಿ, ಅಶಕ್ತಿ ತಲೆದೋರಿ, ಅವರು ನ್ಯೂನ ಪೋಷಣೆಗೆ ಒಳಗಾಗುವುದು ಸಹಜವಾಗಿದೆ. ಆ ರೀತಿ ನ್ಯೂನ ಪೋಷಣೆಗೆ ಒಳಗಾಗಿ ದುರ್ಬಲರಾಗುತ್ತಿರುವ ಮಕ್ಕಳ ಸಂಖ್ಯೆ ವರ್ಷಕ್ಕೆ 7 ಕೋಟಿ 50 ಲಕ್ಷ ಆಗಿದ್ದುದು, ಈಗ ಸುಮಾರು 2 ಕೋಟಿ 50 ಲಕ್ಷಕ್ಕೆ ಇಳಿದಿದೆ.

ಬಡ ಜನಸಮುದಾಯದ ಮಕ್ಕಳ ಸಾವಿಗೆ, ಮತ್ತು, ಅವರ ಬೆಳವಣಿಗೆ ಕುಂಠಿತಗೊಳ್ಳುವುದಕ್ಕೆ ಒಂದು ಪ್ರಮುಖ ಕಾರಣವಾಗಿರುವ ಅತಿಭೇದಿ-ಅತಿಸಾರದ ವಿರುದ್ಧದ ಹೋರಾಟದಲ್ಲೂ ತಕ್ಕಮಟ್ಟಿನ ಪ್ರಗತಿ ಉಂಟಾಗಿದೆ. 1980-ರ ದಶಕದ ಆರಂಭದಲ್ಲಿ, ಅತಿಭೇದಿಯಿಂದ ಶರೀರ ನಿರ್ಜಲವಾಗಿ ಸಾಯುವ ಮಕ್ಕಳ ಸಂಖ್ಯೆ ವರ್ಷಕ್ಕೆ 40 ಲಕ್ಷವಾಗಿತ್ತು. ಆದರೆ, ಅಭಿವೃದ್ಧಿಶೀಲ ದೇಶಗಳಲ್ಲಿನ ಮೂರನೆಯ ಒಂದು ಭಾಗದಷ್ಟು ಕುಟುಂಬಗಳಿಗೆ, ಶರೀರ ನಿರ್ಜಲವಾಗುವುದನ್ನು ತಡೆಗಟ್ಟುವ ಚಿಕಿತ್ಸಾ ವಿಧಾನವನ್ನು ಹೇಳಿಕೊಟ್ಟಾಗಿನಿಂದ ಈಚೆಗೆ, ವರ್ಷಕ್ಕೆ ಸುಮಾರು 10 ಲಕ್ಷ ಮಕ್ಕಳನ್ನು, ಅತಿಭೇದಿ-ಅತಿಸಾರದಿಂದ ಸಾಯುವುದನ್ನು ತಪ್ಪಿಸಲಾಗುತ್ತಿದೆ.

ಪೋಲಿಯೊ ಕೂಡಾ ಈಗ ಹಿಮ್ಮೆಟ್ಟತೊಡಗಿದೆ. 1980-ರಿಂದ ಈಚೆಗೆ, ನರ ದೌರ್ಬಲ್ಯ-ಪಾರ್ಶ್ವವಾಯುವಿನ ಹೊಸ ಪ್ರಕರಣಗಳ ಸಂಖ್ಯೆ ವರ್ಷಕ್ಕೆ 5 ಲಕ್ಷದಿಂದ, 140,000-ಕ್ಕೆ ಇಳಿದಿದೆ.

ರೋಗ ನಿರೋಧಕ ಚುಚ್ಚು ಮದ್ದುಗಳಿಂದಾಗಿ, ನಾಯಿಕೆಮ್ಮು ಮತ್ತು ಟೆಟನಸ್-ಅನ್ನು ಸಹ ತಕ್ಕಮಟ್ಟಿಗೆ ಹತ್ತಿಕ್ಕಲು ಸಾಧ್ಯವಾಗಿದೆ. 1980-ರ ದಶಕದ ಆರಂಭದಲ್ಲಿ ವರ್ಷಕ್ಕೆ ಸುಮಾರು 700,000 ಮಕ್ಕಳು ನಾಯಿ ಕೆಮ್ಮಿನಿಂದ ಸಾಯುತ್ತಿದ್ದವು. ಇಂದು, ಈ ಸಂಖ್ಯೆ ಸುಮಾರು 400,000-ಕ್ಕೆ ಇಳಿದಿದೆ. ಇದೇ ಅವಧಿಯಲ್ಲಿ, ಟೆಟನಸ್‌ನಿಂದ ಸಾಯುವ ನವಜಾತ ಶಿಶುಗಳ ಸಂಖ್ಯೆ 11 ಲಕ್ಷ ಇದ್ದದ್ದು, ಈಗ 600,000-ಕ್ಕೂ ಕಡಿಮೆಯಾಗಿದೆ.

ರೋಗ ನಿರೋಧಕ ಚುಚ್ಚು ಮದ್ದುಗಳಿಂದಾಗಿ, ಮಕ್ಕಳ ಪೋಷಣೆ-ಪೌಷ್ಟಿಕತೆಯ ಕ್ಷೇತ್ರದಲ್ಲೂ ಸಹ ಸಾಕಷ್ಟು ಪ್ರಗತಿಯಾಗಿದ್ದು, ಇದು ಜನ ಸಾಮಾನ್ಯರ ಗಮನಕ್ಕೆ ಬಂದಿಲ್ಲ. ಮಕ್ಕಳಿಗೆ ಪದೆ-ಪದೆ ಜ್ವರಬಂದಲ್ಲಿ, ಅವರ ಹಸಿವು ತಗ್ಗಿ, ಆಹಾರದಲ್ಲಿನ ಸತ್ತ್ವ-ಸಾರವನ್ನು ಹೀರಿಕೊಳ್ಳುವ ಅವರ ಶಕ್ತಿಕುಂದಿ, ರೋಗಗಳ ವಿರುದ್ಧ ಹೋರಾಡಲು ಬೇಕಾದ ಕ್ಯಾಲೋರಿ ಹೊಂದಲು ಅಸಾಧ್ಯವಾಗುತ್ತದೆ. ವಾಂತಿ ಮತ್ತು ಅತಿಭೇದಿಯಿಂದ, ಶರೀರದಲ್ಲಿನ ಪೋಷಕ ತತ್ತ್ವಗಳು ಹೊರಬಂದು, ಮಕ್ಕಳು ನಿತ್ರಾಣಗೊಳ್ಳುತ್ತವೆ. ಒಟ್ಟಿನಲ್ಲಿ, ಪದೆ-ಪದೆ ಬರುವ ಜ್ವರ- ಅಸ್ವಸ್ಥತೆಯಿಂದಾಗಿ, ಮಕ್ಕಳು ನ್ಯೂನ ಪೋಷಣೆ ಮತ್ತು ಅನಾರೋಗ್ಯದ ಅವನತಿಯ ಸುಳಿಯಲ್ಲಿ ಸಿಕ್ಕಿಕೊಳ್ಳುತ್ತವೆ. ಯಾವುದೇ ಒಂದು ಕಾರಣಕ್ಕಿಂತ ಹೆಚ್ಚಾಗಿ, ಅವನತಿಯ ಈ ಸುಳಿಗೆ ಸಿಕ್ಕು, ಅದೆಷ್ಟೋ ಲಕ್ಷ ಮಕ್ಕಳು, ಶೈಶವದಲ್ಲೆ ಸಾಯುತ್ತಿವೆ, ಇಲ್ಲವೆ, ತಮ್ಮ ಪೂರ್ಣ ಸಾಮರ್ಥ್ಯದೊಡನೆ ಬೆಳೆಯಲು ಅಸಮರ್ಥವಾಗುತ್ತಿವೆ. ಇಂತಹುದರಲ್ಲಿ ಶೈಶವದಲ್ಲಿ ಬರುವ ನಿರ್ದಿಷ್ಟ ರೋಗಗಳಿಗೆ ಪ್ರತಿಯಾಗಿ, ಇತ್ತೀಚಿನ ವರ್ಷಗಳಲ್ಲಿ ಸಾಧಿಸಲಾಗಿರುವ ಪ್ರಗತಿ, ನ್ಯೂನ ಪೋಷಣೆ ಮತ್ತು ಕುಂಠಿತಗೊಂಡ ಮಾನಸಿಕ ಹಾಗೂ ಶಾರೀರಿಕ ಬೆಳವಣಿಗೆಯ ಮೂಲ ಸಮಸ್ಯೆಗಳನ್ನು ಎದುರಿಸುವಲ್ಲಿನ ಸಾಧನೆಯ ಪ್ರತೀಕವಾಗಿದೆ. ಬಡತನ ಮತ್ತು ಅಪೂರ್ಣಾಭಿವೃದ್ಧಿಯ ಕಾರಣಗಳನ್ನು ಮತ್ತು ಕುರುಹುಗಳನ್ನು ನಿರ್ಮೂಲಗೊಳಿಸುವತ್ತ ಕೈಗೊಳ್ಳಲಾಗಿರುವ ಗಮನಾರ್ಹವಾದ ಕ್ರಮಗಳು ಸಹ ಇವೇ ಆಗಿವೆ.

ಈ ಮಧ್ಯೆ, ಮಕ್ಕಳ ಹಕ್ಕುಗಳ ಒಪ್ಪಂದ-ಒಡಂಬಡಿಕೆಯನ್ನು ಸಾರ್ವತ್ರಿಕವಾಗಿ ಸ್ಥಿರೀಕರಿಸುವ ವಿಷಯದಲ್ಲೂ ಸಹ ಪ್ರಗತಿ ಸಾಧಿಸಲಾಗಿದೆ. ಈಗಾಗಲೇ 150 ದೇಶಗಳು, ಈ ಒಡಂಬಡಿಕೆಯನ್ನು ಸ್ಥಿರೀಕರಿಸಿದ್ದು, ಈ ಪೈಕಿ 28 ದೇಶಗಳು, ಒಡಂಬಡಿಕೆಯನ್ನು ಅನುಷ್ಠಾನಕ್ಕೆ ತರಲು, ಈಗಾಗಲೇ ಸೂಕ್ತ ಕ್ರಮ ಕೈಗೊಂಡಿವೆ ಎಂದು ವರದಿಯಾಗಿದೆ.

## ಹೆಚ್ಚುತ್ತಿರುವ ಒತ್ತಡ

ಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿನ ಬೆಳವಣಿಗೆಗಳು, ಏನೆಲ್ಲಾ ಸಾಧನೆಗಳಿಗೆ ಪೂರಕವಾಗಿವೆಯಾದರೂ, ಅವಷ್ಟೇ ಸಾಲದು. ಸಾಮಾಜಿಕ

ಕ್ಷೇತ್ರದಲ್ಲಿನ ವ್ಯಾಪಕವಾದ ಬದಲಾವಣೆಗಳು, ಹೊಸ ಜ್ಞಾನ, ತಂತ್ರ ಜ್ಞಾನವನ್ನು ಅಳವಡಿಸಿಕೊಳ್ಳುವುದಕ್ಕೆ ಪೂರಕವಾಗಿವೆ. ಬಹುತೇಕ ದೇಶಗಳಲ್ಲಿ, ಕ್ರಮ-ಕ್ರಮೇಣವಾದ ಆರ್ಥಿಕ ಬೆಳವಣಿಗೆ, ಮತ್ತು ಸಾಮಾಜಿಕ ಬೆಳವಣಿಗೆಯ ನಡುವೆ ನೇರ ಸಂಪರ್ಕವಿರುವುದು ಸ್ಪಷ್ಟವಾಗಿ ಕಂಡುಬಂದಿದೆ. ಈ ಬೆಳವಣಿಗೆ, ಈ ಬದಲಾವಣೆಗಳು ಮುಖ್ಯವಾಗಿ ಎರಡು ರೀತಿಯದ್ದಾಗಿವೆ. ಮೊದಲನೆಯದಾಗಿ, ಈ ಬೆಳವಣಿಗೆ-ಬದಲಾವಣೆಗಳಿಂದಾಗಿ, ಬಹುತೇಕ ಅಭಿವೃದ್ಧಿಶೀಲ ದೇಶಗಳ ಸಂಪರ್ಕ ಸೌಲಭ್ಯಗಳ ಸಾಮರ್ಥ್ಯ ಹೆಚ್ಚಿದ್ದು, ಅದರಿಂದಾಗಿ, ಸಮುದಾಯದ ಎಲ್ಲಾ ವರ್ಗಗಳಿಗೆ ವೈಜ್ಞಾನಿಕ ಪ್ರಗತಿಯ ಪ್ರಯೋಜನಗಳು ಲಭ್ಯವಾಗುವಂತೆ ಮಾಡಲು ಅಗತ್ಯವಾದ ದೈಹಿಕ ಮತ್ತು ಆರ್ಥಿಕ- ಅಂದರೆ- ಹಣಕಾಸಿನ ಅನುಕೂಲಗಳನ್ನು ಹೊಂದಲು ಸಾಧ್ಯವಾಗಿದೆ; ಎರಡನೆಯದಾಗಿ, ಈ ರೀತಿಯ ಪ್ರಗತಿಯನ್ನು ಸಾಧಿಸಲು ಸಾಧ್ಯ-ಎಂಬ ಬಗ್ಗೆ, ಸಾರ್ವಜನಿಕರಲ್ಲಿ ಮತ್ತು ರಾಜಕೀಯ ಮುಖಂಡರಲ್ಲಿ ಈಗ ಹೆಚ್ಚಿನ ಅರಿವು ಮೂಡಿದ್ದು, ಲಕ್ಷಾಂತರ ಕುಟುಂಬಗಳು, ತಡೆಗಟ್ಟ-ನಿವಾರಿಸಬಹುದಾದ ರೋಗಗಳ ಮತ್ತು ನ್ಯೂನ ಪೋಷಣೆಯ ಕರಾಳ ಛಾಯೆಯ ಅಡಿಯಲ್ಲಿ ಜೀವಿಸುವ, ಹಾಗೂ, ಲಕ್ಷಾಂತರ ಮಕ್ಕಳು ಪದೆ-ಪದೆ ಅಸ್ವಸ್ಥರಾಗಿ, ಅವರ ಬೆಳವಣಿಗೆ ಕುಂಠಿತವಾಗಿ,ಬೇಗನೆ ಸಾವನ್ನು ಅಪ್ಪುವ ಅಗತ್ಯವಿಲ್ಲವೆಂಬ ಅರಿವು ಮೂಡಿದ್ದು ಒಂದು ಮಹತ್ತರವಾದ ಅಂಶವಾಗಿದೆ.

ಈಗ, ಈ ಅರಿವು ಹೆಚ್ಚಿ, ರಾಜಕೀಯ ಒತ್ತಡವಾಗಿ ಪರಿವರ್ತಿತಗೊಳ್ಳುತ್ತಿದೆ. ಉದಾಹರಣೆಗಾಗಿ, 1980-ರ ದಶಕದಲ್ಲಿ, ವಿಶ್ವದ ಬಹುತೇಕ ದೇಶಗಳ ಸರ್ಕಾರಿ ಅಧಿಪತಿಗಳು ಅಂಗೀಕರಿಸಿದ ಕಟ್ಟಳೆಗಳ ಮೇರೆಗೆ, ಶೇಕಡ 80-ರಷ್ಟು ಮಕ್ಕಳಿಗೆ ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಹಾಕುವ ಗುರಿ ಇಟ್ಟುಕೊಳ್ಳಲಾಗಿತ್ತು. 1990-ರ ಕೊನೆಯೊಳಗಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿ, ಸುಮಾರು ಅರ್ಧದಷ್ಟು ದೇಶಗಳು ಶೇಕಡ 80-ರ ಈ ಗುರಿಯನ್ನು ತಲುಪಿದ್ದುವಲ್ಲದೆ, ಉಳಿದ ಎಲ್ಲಾ ದೇಶಗಳು ಶೇಕಡ 70 ಅಥವಾ ಅದಕ್ಕೂ ಹೆಚ್ಚಿನ ಗುರಿ ತಲುಪಿವೆ.

ಇದೇ ಸಮಯದಲ್ಲಿ, ಪ್ರಗತಿಯ ಇತರ ಮೂಲ ಪ್ರಯೋಜನಗಳಿಗಾಗಿ ಬೇಡಿಕೆ ಹೆಚ್ಚಿದ್ದು, ಅವುಗಳನ್ನು ಸಾರ್ವತ್ರಿಕವಾಗಿ ಲಭ್ಯವಾಗುವಂತೆ ಮಾಡುವುದು ಅಗತ್ಯವಾಗಿದೆ. ಇಂತಹುದರಲ್ಲಿ, ಸುಲಭವಾಗಿ ತಡೆಗಟ್ಟಬಹುದಾದ ಅತಿಭೇದಿಯಂತಹ ರೋಗಕ್ಕೆ ಪ್ರತೀ ವರ್ಷ 30 ಲಕ್ಷ ಮಕ್ಕಳು ಸಾಯುತ್ತಿರುವುದು; ಅಥವಾ ಆ್ಯಂಟಿಬಾಯೊಟಿಕ್‌ಗಳು ಅಗ್ಗದಲ್ಲಿ ದೊರೆಯುತ್ತಿರುವಾಗ, 30 ಲಕ್ಷಕ್ಕು ಹೆಚ್ಚು ಮಕ್ಕಳು ಉಸಿರಾಟದ ತೊಂದರೆಯಿಂದಾಗಿ ಸಾಯುತ್ತಿರುವುದು; ಲಸಿಕೆಗಳನ್ನು ತಲುಪಿಸಲಾಗದ ಶೇಕಡ 20-ರಷ್ಟು ಮಕ್ಕಳಲ್ಲಿ, ಲಕ್ಷಾಂತರ ಮಕ್ಕಳು, ದಡಾರ, ನಾಯಿಕೆಮ್ಮು ಮತ್ತು ಟಿಟನಸ್-ನಂತಹ ರೋಗಗಳಿಗೆ ಬಲಿಯಾಗುತ್ತಿರುವುದು; ಪೊಲಿಯೊಕ್ಕೆ ಕಾರಣವಾದ ರಸಿಕೆ - ನಂಜನ್ನು ನಿರ್ಮೂಲಗೊಳಿಸಲು ಸಾಧ್ಯವಿರುವಾಗ, ಪ್ರತೀ ವರ್ಷ 100,000 ಮಕ್ಕಳು ನರಗಳ ದೌರ್ಬಲ್ಯ-ಪಾರ್ಶ್ವವಾಯುವಿಗೆ ಒಳಗಾಗುತ್ತಿರುವುದು ಅಕ್ಷಮ್ಯ ಅಪರಾಧವೇಸರಿ.

1980-ರ ದಶಕದಲ್ಲಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಮಕ್ಕಳ ಸಮಸ್ಯೆಗಳ ಬಗ್ಗೆ, ಹೆಚ್ಚಿನ ಅರಿವು ಮೂಡತೊಡಗಿತು. ಅದರ ಜೊತೆಗೆ, ಪ್ರತೀ ಮಗುವಿಗೆ ಕೆಲವೇ ಕೆಲವು ಸೆಂಟ್‌ಗಳನ್ನು ಖರ್ಚುಮಾಡಿ ವಿಟಮಿನ್-ಎ ಕ್ಯಾಪ್‌ಸೂಲ್ ಕೊಡಬಹುದಾಗಿದ್ದರು ಸಹ, ವಿಟಮಿನ್-ಎ ಕೊರತೆಯಿಂದ ವರ್ಷಕ್ಕೆ 2 ಲಕ್ಷ 50 ಸಾವಿರ ಮಕ್ಕಳು ಅಂಧರಾಗುತ್ತಿರುವುದು; ಉಪ್ಪಿಗೆ ಐಓಡಿನ್ ಬೆರೆಸುವ ತೀರ ಅಗ್ಗದ ಮತ್ತು ಸರಳವಾದ ವಿಧಾನವವಿದ್ದರು ಸಹ, ಐಓಡಿನ್-ನ ಕೊರತೆಯಿಂದಾಗಿ ವರ್ಷಕ್ಕೆ 5 ಕೋಟಿ ಮಕ್ಕಳ ಮಾನಸಿಕ ಮತ್ತು ಶಾರೀರಿಕ ಬೆಳವಣಿಗೆ ಕುಂಠಿತಗೊಂಡು, 100,000ಕ್ಕು ಹೆಚ್ಚು ಮಕ್ಕಳು ಹೆಡ್ಡರಾಗಿ-ಕುರೂಪಿಗಳಾಗಿ ಹುಟ್ಟುತ್ತಿರುವುದು; ವಿಶ್ವದ ಬಹುತೇಕ ಭಾಗಗಳಲ್ಲಿ ಮಕ್ಕಳಿಗೆ ಮೊಲೆ ಊಡಿಸುವ ಪದ್ಧತಿ-ರೂಢಿ ತಗ್ಗುತ್ತಿರುವುದರಿಂದ, ಸುಮಾರು 10 ಲಕ್ಷ ಮಕ್ಕಳು ಸಾಯುತ್ತಿರುವುದು; ಪ್ರತೀ ವ್ಯಕ್ತಿಗೆ ಸುಮಾರು 2.50 ಡಾಲರ್ ಖರ್ಚುಮಾಡಿ ನಿಯಂತ್ರಿಸಬಹುದಾದ ನಾರುಹುಣ್ಣಿನಿಂದ ಲಕ್ಷಾಂತರ ಜನರು ನಿತ್ರಾಣರಾಗಿ ನೋವನ್ನು ಅನುಭವಿಸುತ್ತಿರುವುದು- ಜನರ ಅರಿವಿಗೆ ಬಂದು, ಈ ಬಗ್ಗೆ ಪ್ರತಿಭಟನೆ ವ್ಯಕ್ತವಾಗುತ್ತಿರುವುದು ಗಮನಾರ್ಹವಾಗಿದೆ.

## 2000ನೆಯ ಇಸವಿಗಾಗಿ ಹೊಸ ಧ್ಯೇಯೋದ್ದೇಶಗಳು

ಶೇಕಡ 80-ರಷ್ಟು ಮಕ್ಕಳಿಗೆ ರೋಗ ನಿರೋಧಕ ಚುಚ್ಚು ಮದ್ದುಹಾಕುವ ಗುರಿಯನ್ನು ತಲುಪುವಲ್ಲಿನ ಯಶಸ್ಸು, ಈಗ

# ವಿಶ್ವದ ಮಕ್ಕಳ ಸ್ಥಿತಿಗತಿಗಳು 1994

ಇತರ ಗುರಿಗಳನ್ನು ತಲಪುವ ಪ್ರಯತ್ನಗಳಿಗೆ ಚಾಲ್ತಿ ನೀಡಿದೆ. ಮಾನವನ ಇತಿಹಾಸದಲ್ಲಿ, ಇದೇ ಮೊದಲಸಲವಾಗಿ, ವೈಜ್ಞಾನಿಕ ಕ್ಷೇತ್ರದಲ್ಲಿನ ಒಂದು ಮಹತ್ ಸಾಧನೆಯನ್ನು, ವಿಶ್ವದ ಎಲ್ಲಾ ಜನಸಮುದಾಯಗಳ ಪ್ರಯೋಜನಕ್ಕಾಗಿ ಬಳಸಿಕೊಳ್ಳಲು ಸಾಧ್ಯವಾಗಿದೆ. ಇದರಿಂದ, ಅಂತರರಾಷ್ಟ್ರೀಯ ಸಮುದಾಯ ಸತತವಾಗಿ ತನ್ನ ಬೆಂಬಲ ನೀಡುವುದನ್ನು ಮುಂದುವರಿಸಿದಲ್ಲಿ, ಮತ್ತು ಸಂಬಂಧಪಟ್ಟ ದೇಶಗಳು, ಅಗತ್ಯವಾದ ಪ್ರಯತ್ನ ಮಾಡಲು ನಿರ್ಧರಿಸಿದಲ್ಲಿ, ಇಷ್ಟೇ ಮುಖ್ಯವಾದ ಗುರಿಗಳನ್ನು ತಲಪುವುದು ಸುಲಭಸಾಧ್ಯ ಎಂಬುದು ವಿದಿತವಾಗಿದೆ.

1990-ರ ಚಳಿಗಾಲದಲ್ಲಿ, ಮಕ್ಕಳ ಹಿತರಕ್ಷಣೆಗಾಗಿ ಏನನ್ನಾದರೂ ಮಾಡಬಹುದು- ಮಾಡಬೇಕು- ಎಂಬ ಅರಿವು, ಮಕ್ಕಳಿಗಾಗಿ ವಿಶ್ವಮಟ್ಟದ ಒಂದು ಅಗ್ರಸಭೆ ನಡೆಸುವುದಕ್ಕೆ ಪ್ರೇರಣೆ ನೀಡಿತು. 71 ದೇಶಗಳ ಅಧ್ಯಕ್ಷರು ಮತ್ತು ಪ್ರಧಾನ ಮಂತ್ರಿಗಳು ಸೇರಿದಂತೆ, ವಿಶ್ವದ ಬಹುತೇಕ ದೇಶಗಳ ಪ್ರತಿನಿಧಿಗಳು ಭಾಗವಹಿಸಿದ್ದ ಈ ಅಗ್ರಸಭೆಯಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿನ ಮುನ್ನಡೆಯಿಂದಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಸಂಪರ್ಕ ಸೌಲಭ್ಯಗಳನ್ನು ಮತ್ತು ಅವುಗಳ ಸಾಮರ್ಥ್ಯವನ್ನು ಹೆಚ್ಚಿಸಿ, ಖರ್ಚನ್ನು ತಗ್ಗಿಸಿ, ಏನೆಲ್ಲಾ ಸಾಧಿಸಬಹುದು- ಎಂಬುದನ್ನು ಪರಿಶೀಲಿಸಲಾಯಿತು.. ಈ ಅಗ್ರಸಭೆಯಲ್ಲಿ ಒಂದು ಒಪ್ಪಂದ ಮಾಡಿಕೊಳ್ಳಲಾಯಿತಲ್ಲದೆ- ಈಗ 159 ದೇಶಗಳು ಈ ಒಪ್ಪಂದಕ್ಕೆ ಸಹಿಹಾಕಿವೆ- ಹಲವೊಂದು ಹೊಸ ಗುರಿಗಳನ್ನು- ಸಾಮಾಜಿಕ ಧ್ಯೇಯೋದ್ದೇಶಗಳನ್ನು ನಿಗದಿ ಮಾಡಲಾಯಿತು. ಮತ್ತು, 2000ನೆಯ ಇಸವಿಯ ಒಳಗಾಗಿ ಈ ಗುರಿಗಳನ್ನು ತಲುಪಲು, ರಾಷ್ಟ್ರೀಯ ಕಾರ್ಯಕ್ರಮಗಳನ್ನು ರೂಪಿಸುವಂತೆ ಎಲ್ಲಾ ದೇಶಗಳಿಗೂ ಸೂಚಿಸಲಾಗಿತ್ತು.

ಈ ಹೊಸ ಗುರಿ-ಧ್ಯೇಯೋದ್ದೇಶಗಳಲ್ಲಿ, ಐದು ವರ್ಷಗಳಿಗೂ ಕಡಿಮೆ ಮಯಸ್ಸಿನ ಮಕ್ಕಳ ಮರಣ ಪ್ರಮಾಣವನ್ನು ಮೂರನೆಯ ಒಂದು ಭಾಗದಷ್ಟಾದರೂ ತಗ್ಗಿಸುವುದು, ನ್ಯೂನ ಪೋಷಣೆಗೆ ಒಳಗಾದ ಮಕ್ಕಳ ಸಂಖ್ಯೆಯನ್ನು ಅರ್ಧದಷ್ಟಾದರೂ ತಗ್ಗಿಸುವುದು, ರೋಗ ನಿರೋಧಕ ಚುಚ್ಚುಮದ್ದು ಹಾಕಿಸಿಕೊಂಡ ಮಕ್ಕಳ ಪ್ರಮಾಣವನ್ನು ಶೇಕಡ 90-ರಷ್ಟಕ್ಕೆ ಹೆಚ್ಚಿಸುವುದು, ಮಕ್ಕಳಿಗೆ ಬರುವ ಘಾತಕ ರೋಗಗಳನ್ನು ನಿಯಂತ್ರಿಸಿ ಹತ್ತಿಕ್ಕುವುದು, ಪೋಲಿಯೊವನ್ನು ನಿರ್ಮೂಲಗೊಳಿಸುವುದು, ತಾಯಿಂದಿರ-ಬಾಣಂತಿಯರ ಮರಣ ಪ್ರಮಾಣವನ್ನು ಅರ್ಧಕ್ಕೆ ಇಳಿಸುವುದು, ಶೇಕಡ 80-ರಷ್ಟಾದರೂ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದ ಸೌಲಭ್ಯ ಕಲ್ಪಿಸಿಕೊಡುವುದು, ಎಲ್ಲಾ ಜನ ಸಮುದಾಯಗಳಿಗೆ ಸುರಕ್ಷಿತವಾದ ನೀರು ಮತ್ತು ನೈರ್ಮಲ್ಯ ವ್ಯವಸ್ಥೆಯ ಸೌಲಭ್ಯಗಳನ್ನು ಒದಗಿಸುವುದು, ಮತ್ತು, ಬೇಕಾದವರಿಗೆ ಕುಟುಂಬ ಯೋಜನೆಯ ಬಗ್ಗೆ ಮಾಹಿತಿ ಮತ್ತು ಸೇವಾ ಸವಲತ್ತುಗಳನ್ನು ಕಲ್ಪಿಸಿಕೊಡುವುದು ಸೇರಿವೆ.

ಈ ಎಲ್ಲಾ ಗುರಿಗಳನ್ನು ತಲುಪಲು ತಗಲುವ ಹೆಚ್ಚುವರಿ ಖರ್ಚು- ಒಟ್ಟಾರೆ ವೆಚ್ಚ, 2500 ಕೋಟಿ ಡಾಲರ್ ಆಗಬಹುದೆಂದು ಅಂದಾಜು ಮಾಡಲಾಗಿದೆ. ಅಭಿವೃದ್ಧಿಶೀಲ ದೇಶಗಳ ಸರ್ಕಾರಿ ಖರ್ಚು-ವೆಚ್ಚದ ಶೇಕಡ 20-ರಷ್ಟು ಮೊತ್ತವನ್ನು, ಸುಲಭವಾಗಿ, ಈ ಧ್ಯೆಯೋದ್ದೇಶಗಳಿಗಾಗಿ ವಿನಿಯೋಗಿಸಬಹುದಾಗಿದೆ. ಈ ಹಣವನ್ನು ದೀರ್ಘಾವಧಿ ಬಂಡವಾಳದ ರೂಪದಲ್ಲಿ, ಪೋಷಣೆ, ಪ್ರಾಥಮಿಕ ಆರೋಗ್ಯ ಆರೈಕೆ, ಮೂಲ ಶಿಕ್ಷಣ, ಸುರಕ್ಷಿತ ಮತ್ತು ಸ್ವಚ್ಛವಾದ ನೀರಿನ ಪೂರೈಕೆ, ಹಾಗೂ ಕುಟುಂಬ ಯೋಜನೆಯ ಕಾರ್ಯಗಳಿಗಾಗಿ ವಿನಿಯೋಗಿಸಬಹುದಾಗಿದೆ.

ಸಧ್ಯಕ್ಕೆ, ಸರ್ಕಾರಿ ಖರ್ಚು-ವೆಚ್ಚದ ಮತ್ತು ವಿದೇಶಿ ನೆರವಿನ ಕೇವಲ ಶೇಕಡ 10-ರಷ್ಟು ಮೊತ್ತವನ್ನು, ಈ ಧ್ಯೇಯೋದ್ದೇಶಗಳಿಗಾಗಿ ವಿನಿಯೋಗಿಸಲಾಗುತ್ತಿದೆ.

1993-ನೆಯ ಸಾಲಿನ ಜುಲೈ ತಿಂಗಳವೇಳೆಗೆ, 86 ದೇಶಗಳ ಸರ್ಕಾರಗಳು, ಈ ಹೊಸ ಗುರಿಗಳನ್ನು ತಲಪುವುದಕ್ಕಾಗಿ, ರಾಷ್ಟ್ರೀಯ ಕಾರ್ಯ ಕ್ರಮಗಳನ್ನು ರೂಪಿಸಿದ್ದವು. ಈಗ ಈ ದೇಶಗಳು ನಿಗದಿತ ಕಾರ್ಯ ಕ್ರಮಗಳನ್ನು ಜಾರಿಗೆ ತರಲು, ಮತ್ತು, ಈ ಕಾರ್ಯಕ್ರಮಗಳಿಗಾಗಿ ಹಣ ಒದಗಿಸಲು ಸಹ ಪ್ರಯತ್ನಿಸುತ್ತಿವೆ. ಇತರ 56 ದೇಶಗಳು, ಈಗ ಈ ಧ್ಯೇಯೋದ್ದೇಶಗಳಿಗೆ ಪೂರಕವಾದ ಯೋಜನೆಗಳನ್ನು ರೂಪಿಸುತ್ತಿವೆ.

ಅಭಿವೃದ್ಧಿಶೀಲ ದೇಶಗಳ ಬಹುತೇಕ ಸರ್ಕಾರಗಳು, ತುರ್ತು ಕ್ರಮವಾಗಿ, ಈ ದಶಕದ ಮಧ್ಯಾವಧಿಯ ಒಳಗಾಗಿ ತಲುಪಲು ಬರುವಂತಹ, ಸೀಮಿತ ಗುರಿಗಳನ್ನು ಮುಂದಿಟ್ಟುಕೊಂಡು ಕೆಲಸಮಾಡುತ್ತಿವೆ. 1995-ರ ಒಳಗಾಗಿ ತಲುಪಲು ಮುಂದಿಟ್ಟುಕೊಳ್ಳಲಾಗಿರುವ ಗುರಿಗಳಲ್ಲಿ, ನವಜಾತ ಶಿಶುಗಳಲ್ಲಿ ಟೆಟನಸ್ ಆಗದಂತೆ ನೋಡಿಕೊಳ್ಳುವುದು, ದಡರದಿಂದಾಗಿ

ಸಾಯುವ ಮಕ್ಕಳ ಪ್ರಮಾಣವನ್ನು ಶೇಕಡ 95-ರಷ್ಟಾದರೂ ತಗ್ಗಿಸುವುದು, ಶರೀರ ನಿರ್ಜಲವಾಗುವುದನ್ನು ತಡೆಗಟ್ಟುವ-ಓ.ಆರ್.ಟಿ. ಚಿಕಿತ್ಸಾ ವಿಧಾನದ ಬಳಕೆಯ ಪ್ರಮಾಣವನ್ನು ಶೇಕಡ 80-ರಷ್ಟಕ್ಕೆ ಹೆಚ್ಚಿಸುವುದು, ಆಸ್ಪತ್ರೆಗಳು ಮತ್ತು ಪ್ರಸೂತಿ ಗೃಹಗಳಲ್ಲಿ ಮೊಲೆಯೂಡಿಸುವ ರೂಢಿಯನ್ನು ತಪ್ಪದೆ ಅನುಸರಿಸುವುದು, ಆಯ್ದ ಹಲವು ದೇಶಗಳಲ್ಲಿನ ಪೋಲಿಯೊವನ್ನು ನಿರ್ಮೂಲಗೊಳಿಸುವುದು, ವಿಟಮಿನ್-ಎ ಕೊರತೆಯನ್ನು ಸಂಪೂರ್ಣವಾಗಿ ನೀಗಿಸುವುದು, ಸಾರ್ವತ್ರಿಕವಾಗಿ ಉಪ್ಪಿಗೆ ಐಒಡಿನ್ ಬೆರೆಸಿ, ಸರಬರಾಜು ಮಾಡುವುದು, ಮತ್ತು ಎಲ್ಲಾ ದೇಶಗಳಲ್ಲಿ, ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಹಾಕುವ ಪ್ರಮಾಣವನ್ನು ಶೇಕಡ 80-ರಷ್ಟಕ್ಕೆ ಹೆಚ್ಚಿಸುವುದು-ಸೇರಿವೆ.

ರಾಜಕೀಯ ಗಲಭೆ-ಗೊಂದಲಗಳಿಗೆ ಮತ್ತು ಆರ್ಥಿಕ ದುಸ್ಥಿತಿಗೆ ಒಳಗಾದ ದೇಶಗಳನ್ನು ಬಿಟ್ಟು, ಆಫ್ರಿಕದ ಸಹಾರಾ ವಿಭಾಗದ ಕಡು ಬಡ ರಾಷ್ಟ್ರಗಳು ಸಹ, ಈ ಎಲ್ಲಾ ಗುರಿಗಳನ್ನು-ಧ್ಯೇಯೋದ್ದೇಶಗಳನ್ನು ತಲಪುವುದು ವಾಸ್ತಾವಿಕವು ಮತ್ತು ಕಾರ್ಯ ಸಾಧ್ಯವೂ ಆಗಿದೆ.

## ವಾಸ್ತವಿಕ ಪ್ರಗತಿ

ಪ್ರಮುಖವಾದ ಹಲವು ಕ್ಷೇತ್ರಗಳಲ್ಲಿ, ನಿಗದಿತ ಗುರಿಗಳನ್ನು ತಲಪುವತ್ತ, ಈಗಾಗಲೇ, ಹೆಚ್ಚು ವಾಸ್ತವಿಕವಾದ ಪ್ರಗತಿಯನ್ನು ಸಾಧಿಸಲಾಗಿದೆ. 1990-ರಿಂದ ಈಚೆಗೆ, ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸುವ ಕ್ಷೇತ್ರದಲ್ಲಿನ ಪ್ರಗತಿಯ ಗತಿಯನ್ನು ಕಾಪಾಡಿಕೊಂಡು ಬರಲಾಗಿದೆ. ಈಗ ಲಭ್ಯವಿರುವ, 1992-ರ ಅಂಕಿಸಂಖ್ಯೆಗಳ ಮೇರೆಗೆ, 101 ದೇಶಗಳ ಪೈಕಿ, 37 ದೇಶಗಳಲ್ಲಿ, ತ್ರಿವಳಿ ಲಸಿಕೆಗಳ ಮೂರನೆಯ ಡೋಜ್-ಅನ್ನು (ಗಳಗಂಡ, ನಾಯಿ ಕೆಮ್ಮು ಮತ್ತು ಟೆಟನಸ್) ಮಕ್ಕಳಿಗೆ ಹಾಕುವ ಪ್ರಮಾಣ ಹೆಚ್ಚಿದೆ; 30 ದೇಶಗಳಲ್ಲಿ 1990-ರ ಮಟ್ಟವನ್ನು ಕಾಪಾಡಿಕೊಂಡು ಬರಲಾಗಿದೆ; ಆದರೆ, ಉಳಿದ 34 ದೇಶಗಳಲ್ಲಿ, ಶೇಕಡ 5ಕ್ಕೂ ಹೆಚ್ಚಿನ ಪ್ರಮಾಣದಲ್ಲಿ ಹಿಂಜರಿತವಾಗಿದ್ದುದು ಕಂಡುಬಂದಿದೆ. ಹದಿನೆಂಟು ಅಭಿವೃದ್ಧಿಶೀಲ ದೇಶಗಳು ಮಾತ್ರ, 2000-ನೆಯ ಇಸವಿಯ ವೇಳೆಗೆ, ಶೇಕಡ 90-ರಷ್ಟು ಮಕ್ಕಳಿಗೆ ರೋಗ ನಿರೋಧಕ ಚುಚ್ಚು ಮದ್ದು ಹಾಕಿಸುವ ಗುರಿಯನ್ನು, ಈಗಾಗಲೇ ತಲುಪಿವೆ.

ಈಗ, ಬ್ರಾಜಿಲ್, ಚೀಲಿ, ಚೀನಾ, ಕೋಸ್ಟರಿಕಾ, ರಾವಾಂಡಾ, ಟುನಿಸಿಯಾ, ವಿಯಟ್‌ನಾಮ್ ಮತ್ತು ಜಿಂಬಾಬ್ವೆ ಸೇರಿದಂತೆ, ಅನೇಕ ದೇಶಗಳಲ್ಲಿ ಈ ದಶಕದ ಮಧ್ಯಾವಧಿಯ ಒಳಗಾಗಿ ದಡಾರದ ಪ್ರಕರಣಗಳನ್ನು ಶೇಕಡ 95-ರಷ್ಟು ತಗ್ಗಿಸುವ ಗುರಿಗಳನ್ನು ತಲಪುವ ಸಾಧ್ಯತೆಗಳಿವೆ. ಒಟ್ಟಿನಲ್ಲಿ, ರೋಗ ನಿರೋಧಕ ಚುಚ್ಚು ಮದ್ದುಗಳ ಪ್ರಾಬಲ್ಯ ಹೆಚ್ಚುವುದಕ್ಕೆ ಮುಂಚೆ ಇದ್ದ ಮಟ್ಟಕ್ಕೆ ಹೋಲಿಸಿದಲ್ಲಿ, ದಡಾರದ ಪ್ರಕರಣಗಳ ಪ್ರಮಾಣ ಶೇಕಡ 66-ರಷ್ಟು, ಮತ್ತು, ದಡಾರದಿಂದಾಗಿ ಮಕ್ಕಳು ಸಾಯುವ ಪ್ರಮಾಣ ಶೇಕಡ 88-ರಷ್ಟು ತಗ್ಗಿದೆ.

1995-ರ ವೇಳೆಗೆ, ವಿಶ್ವದ ಹಲವು ಆಯ್ದ ಪ್ರದೇಶಗಳಲ್ಲಿ, ಪೋಲಿಯೊವನ್ನು ನಿರ್ಮೂಲಗೊಳಿಸುವ ಕ್ಷೇತ್ರದಲ್ಲಿ ಅಗಾಧವಾದ ಪ್ರಗತಿಯಾಗಿರುವುದನ್ನು, ಈ ವರದಿಯಲ್ಲಿ ಪ್ರಸ್ತಾಪಿಸಲಾಗಿದೆ. ಉತ್ತರ, ಮಧ್ಯ ಅಥವಾ ದಕ್ಷಿಣ ಅಮೆರಿಕದಲ್ಲಿ, ಕಳೆದ ಎರಡು ವರ್ಷಗಳಲ್ಲಿ, ಪೋಲಿಯೊದ, ಒಂದಾದರೂ ಹೊಸ ಪ್ರಕರಣ ವರದಿಯಾಗಿಲ್ಲ. ಯುರೋಪ್, ಉತ್ತರ ಆಫ್ರಿಕ, ದಕ್ಷಿಣ ಆಫ್ರಿಕ ಮತ್ತು ಮಧ್ಯ ಪೂರ್ವ ದೇಶಗಳಲ್ಲಿ, ಈಗ, ಪೋಲಿಯೊ ಮುಕ್ತ ವಲಯಗಳ ಸೃಷ್ಟಿಯಾಗುತ್ತಿದೆ. ವಿಶ್ವಾದ್ಯಂತ, ಈಗ, ರೋಗ ನಿರೋಧಕ ಚುಚ್ಚು ಮದ್ದುಗಳು ಪ್ರಚುರವಾಗುವುದಕ್ಕು ಮುಂಚೆ ಇದ್ದ ಪ್ರಮಾಣಕ್ಕೆ ಹೋಲಿಸಿದಲ್ಲಿ, ಪೋಲಿಯೊದ ಪ್ರಕರಣಗಳು ಶೇಕಡ 80-ರಷ್ಟು ತಗ್ಗಿರುವುದು ಕಂಡುಬಂದಿದೆ.

ಈಗ, ಅನೇಕ ದೇಶಗಳಲ್ಲಿ, ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸುವ ವ್ಯವಸ್ಥೆಯನ್ನು, ಆರು ತಿಂಗಳು ಮೀರಿದ ಮಕ್ಕಳಿಗೆ ವಿಟಮಿನ್-ಎ ಕ್ಯಾಪ್‌ಸೂಲ್‌ಗಳನ್ನು ಹಂಚಿಕೊಡಲು ಬಳಸಿಕೊಳ್ಳಲಾಗುತ್ತಿದೆ. ಈ ರೀತಿಯ ವಿಧಾನವನ್ನು ಅಂಗೀಕರಿಸಿ ಜಾರಿಗೆ ತಂದಿರುವ ದೇಶಗಳಲ್ಲಿ, ಬಾಂಗ್ಲಾಗೇಶ, ಬ್ರಾಜಿಲ್, ಭಾರತ, ಮಲಾವಿ ಮತ್ತು ಫಿಲಿಪೈನ್ಸ್ ಸೇರಿವೆ. 1992-ರಲ್ಲಿ ನಡೆಸಲಾದ ಸ್ವತಂತ್ರವಾದ ಸಮೀಕ್ಷೆ-ವಿಶ್ಲೇಷಣೆಗಳಿಂದ, ವಿಟಮಿನ್-ಎ-ಯನ್ನು ಪೂರಕವಾಗಿ ಒದಗಿಸಿದ್ದರಿಂದ, ಅಭಿವೃದ್ಧಿಶೀಲ ದೇಶಗಳಲ್ಲಿನ ಮಕ್ಕಳ ಮರಣ ಪ್ರಮಾಣ ಸರಾಸರಿ ಶೇಕಡ 25-ರಷ್ಟು ತಗ್ಗಿರುವುದು ಕಂಡುಬಂದಿದೆ.

ಅನೇಕ ದೇಶಗಳಲ್ಲಿ, ಈ ದಶಕದ ಮಧ್ಯಾವಧಿಯ ಒಳಗಾಗಿ, ಐಒಡಿನ್-ನ ಕೊರತೆಯನ್ನು ನೀಗಿಸುವ ಗುರಿಯನ್ನು ತಲಪುವ

ವಿಷಯದಲ್ಲಿ ತೀವ್ರ ಪ್ರಗತಿ ಸಾಧಿಸಲಾಗಿದೆ. ಕಳೆದ ಐದು ವರ್ಷಗಳಲ್ಲಿ, ಅಭಿವೃದ್ಧಿಶೀಲ ದೇಶಗಳಲ್ಲಿರುವ ಮಕ್ಕಳಲ್ಲಿ ಅರ್ಧದಷ್ಟು ಮಕ್ಕಳನ್ನು ಹೊಂದಿರುವ ಬಾಂಗ್ಲಾದೇಶ, ಚೀನಾ, ಭಾರತ ಮತ್ತು ಪಾಕಿಸ್ತಾನ ಸೇರಿದಂತೆ, ಒಟ್ಟು 24 ಅಭಿವೃದ್ಧಿಶೀಲ ದೇಶಗಳಲ್ಲಿ, ಉಪ್ಪಿಗೆ ಐಓಡಿನ್ ಬೆರೆಸಿ ಮಾರುವ ರಾಷ್ಟ್ರೀಯ ಕಾರ್ಯಕ್ರಮವನ್ನು ಜಾರಿಗೆತರಲಾಗಿದೆ. ಇತರ 33 ದೇಶಗಳಲ್ಲಿ ಇಂತಹ ಕಾರ್ಯಕ್ರಮಗಳನ್ನು ಜಾರಿಗೆ ತರಲು, ಈಗಾಗಲೇ ಸೂಕ್ತ ಕ್ರಮಕೈಗೊಳ್ಳಲಾಗಿದೆ. ಈ ಕಾರ್ಯಕ್ರಮಗಳ ಯಶಸ್ಸು, ಫಲಗಳು ಸಹ, ಈಗ ವ್ಯಕ್ತವಾಗತೊಡಗಿವೆ. ಭೂತಾನ್, ಬೊಲಿವಿಯಾ ಮತ್ತು ಈಕ್ವೆಡಾರ್-ನಲ್ಲಿ, ಹೆಡ್ಡ ಕುರೂಪಿಗಳ ಜನನವು ಸೇರಿದಂತೆ, ಐಓಡಿನ್-ನ ಕೊರತೆಯ ಲಕ್ಷಣಗಳು ತಲೆದೋರುವುದನ್ನು ತಡೆಗಟ್ಟುವ ಮಟ್ಟಿಗೆ ಪ್ರಗತಿ ಸಾಧಿಸಲಾಗಿದೆ.

1990-ರ ದಶಕದಲ್ಲಿ, ಶಿಶುಗಳಿಗೆ ಬಾಟಲಿ ಹಾಲು ಕುಡಿಸುವುದರ ವಿರುದ್ಧವು ಸಹ, ತಕ್ಕ ಮಟ್ಟಿನ ಪ್ರಗತಿ ಸಾಧಿಸಲಾಗಿದೆ. ವಿಶ್ವ ಆರೋಗ್ಯ ಸಂಸ್ಥೆ, ಯೂನಿಸೆಫ್ ಮತ್ತು ಹಲವು ಸರ್ಕಾರೇತರ ಸಂಘ-ಸಂಸ್ಥೆಗಳು ಸುಮಾರು ಒಂದು ದಶಕದ ಕಾಲ ನಡೆಸಿದ ಪ್ರಯತ್ನ- ಪರಿಶ್ರಮದ ಫಲವಾಗಿ, ಸುಮಾರು 80 ಅಭಿವೃದ್ಧಿಶೀಲ ದೇಶಗಳಲ್ಲಿನ ಆಸ್ಪತ್ರೆಗಳು ಮತ್ತು ಪ್ರಸೂತಿ ಗೃಹಗಳಲ್ಲಿ, ಬಾಣಂತಿಯರಿಗೆ ಶಿಶು ಆಹಾರದ ಸೂತ್ರಿಕರಣಗಳನ್ನು ಉಚಿತವಾಗಿ, ಇಲ್ಲವೆ, ಅಗ್ಗದಲ್ಲಿ ಒದಗಿಸುವುದನ್ನು ನಿಷೇಧಿಸಲಾಗಿದೆ. ವಿಶ್ವ ಆರೋಗ್ಯ ಸಂಸ್ಥೆ/ ಯೂನಿಸೆಫ್-ನ 'ಮಗುವಿನ ಸ್ನೇಹಮಯಿ ಆಸ್ಪತ್ರೆ'-ಯ ಕಾರ್ಯಕ್ರಮದ ಆಡಿ, 100ಕ್ಕೂ ಹೆಚ್ಚು ಅಭಿವೃದ್ಧಿಶೀಲ ಮತ್ತು ಕೈಗಾರಿಕಾಕೃತ ದೇಶಗಳಲ್ಲಿನ ನೂರಾರು ಆಸ್ಪತ್ರೆಗಳು ಹಾಗೂ ಪ್ರಸೂತಿ ಗೃಹಗಳು, ವಿಶ್ವ ಆರೋಗ್ಯ ಸಂಸ್ಥೆ ಮತ್ತು ಯೂನಿಸೆಫ್ 1989-ರಲ್ಲಿ ರೂಪಿಸಿದ, 'ಯಶಸ್ವಿಯಾಗಿ ಮೊಲೆಯೂಡಿಸುವುದಕ್ಕೆ ಪೂರಕವಾದ ಹತ್ತು ಕ್ರಮಗಳನ್ನು' ಅಂಗೀಕರಿಸಿ, ಆಚರಿಸುತ್ತಿವೆ.

1995-ರ ವೇಳೆಗೆ, ನಾರು ಹುಳದ ರೋಗವನ್ನು ನಿಯಂತ್ರಿಸುವ ಗುರಿಯನ್ನು ತಲಪುವ ಸಾಧ್ಯತೆಗಳು ಕಂಡುಬರುತ್ತಿವೆ. ಇದರೊಡನೆ, ನಾರು ಹುಳುವಿನ ರೋಗದಿಂದ ನರಳುವ ಅದೆಷ್ಟೊ ಜನರು, ತಾಳಲಾಗದ ನೋವು, ಜ್ವರ, ತಲೆ ಸುತ್ತುವುದು, ವಾಂತಿ, ಅತಿಭೇದಿ ಮತ್ತು ಸಾಮಾನ್ಯವಾದ ಶಾರೀರಿಕ ದೌರ್ಬಲ್ಯ- ಇವೇ ಮುಂತಾದವುಗಳಿಂದ ಮುಕ್ತಿ ಪಡೆಯುವ ಸಾಧ್ಯತೆಗಳಿವೆ. 1980-ರ ದಶಕದ ಕೊನೆಯಲ್ಲಿ, ವಿಶ್ವದಾದ್ಯಂತ, ಸುಮಾರು 1 ಕೋಟಿ ಜನರು, ನಾರು ಹುಳುವಿನ ರೋಗಕ್ಕೆ ಒಳಗಾಗಿದ್ದರು. 1992-ರಲ್ಲಿ ಈ ಸಂಖ್ಯೆ 10 ಲಕ್ಷಕ್ಕೆ ಇಳಿದಿತ್ತಲ್ಲದೆ, ಈ 10 ಲಕ್ಷ ಜನರಲ್ಲಿ ಶೇಕಡ 90-ರಷ್ಟು ರೋಗಿಗಳು, ಆಫ್ರಿಕದ ಏಳು ದೇಶಗಳಲ್ಲಿದ್ದರು.

2000ನೆಯ ವರ್ಷದ ವೇಳೆಗೆ, ಎಲ್ಲರಿಗೂ ಸ್ವಚ್ಛವಾದ ನೀರು ಒದಗಿಸುವ ಗುರಿಯನ್ನು ತಲಪುವತ್ತ, ಅನೇಕ ಅಭಿವೃದ್ಧಿಶೀಲ ದೇಶಗಳು ಉತ್ತಮ ಪ್ರಗತಿ ಸಾಧಿಸಿದ್ದು ಕಂಡುಬಂದಿದೆ. ಭಾರತದಲ್ಲಿ ಸುರಕ್ಷಿತವಾದ ಮೂಲಗಳಿಂದ ನೀರಿನ ಸೌಲಭ್ಯಗಳನ್ನು ಪಡೆಯುತ್ತಿರುವ ಗ್ರಾಮಸ್ಥರ ಪ್ರಮಾಣ, 1980-ರಲ್ಲಿ ಶೇಕಡ 30 ಇದ್ದದ್ದು, 1992-ರಲ್ಲಿ ಶೇಕಡ 80-ಕ್ಕೆ ಏರಿದ್ದು ಗಮನಾರ್ಹವಾಗಿದೆ. ಈ ಪ್ರಗತಿ ಹೀಗೆಯೇ ಮುಂದುವರಿದಲ್ಲಿ, ಭಾರತ, 2000ನೆಯ ವರ್ಷಕ್ಕೆ ನಿಗದಿಯಾಗಿರುವ ಗುರಿಯನ್ನು, ಗ್ರಾಮೀಣ ಪ್ರದೇಶಗಳಲ್ಲಿನ ಎಲ್ಲರಿಗೂ ನೀರಿನ ಸವಲತ್ತುಗಳನ್ನು ಒದಗಿಸುವ ಗುರಿಯನ್ನು, 1997-ರ ಒಳಗಾಗಿ ತಲುಪಬಹುದಾಗಿದೆ. ಭಾರತದಲ್ಲಿ, ಈಗ 22 ಲಕ್ಷ ಇಂಡಿಯಾ ಮಾರ್ಕ್-II ಹ್ಯಾಂಡ್ ಪಂಪ್‌ಗಳನ್ನು ಪ್ರತಿಷ್ಠಾಪಿಸಲಾಗಿದೆ. ಭಾರತ ಸರ್ಕಾರ, ಯೂನಿಸೆಫ್ ಮತ್ತು ಹಲವು ಸರ್ಕಾರೇತರ ಸಂಘ-ಸಂಸ್ಥೆಗಳ ಪರಸ್ಪರ ಸಹಕಾರದಿಂದ ಅಭಿವೃದ್ಧಿಪಡಿಸಿ-ಸ್ಥಾಪಿಸಲಾದ ಈ ಹ್ಯಾಂಡ್ ಪಂಪ್‌ಗಳಿಂದಾಗಿ, ಪ್ರತೀ ವ್ಯಕ್ತಿಗೆ ಕೇವಲ 4 ಡಾಲರ್ ಖರ್ಚುಮಾಡಿ, 55 ಕೋಟಿ ಜನರಿಗೆ ನೀರು ಸರಬರಾಜು ಮಾಡಲು ಸಾಧ್ಯವಾಗಿದೆ. ಬಾಂಗ್ಲಾದೇಶದಲ್ಲಿ ಏನೆಲ್ಲಾ ಸಮಸ್ಯೆಗಳು ಇದ್ದಾಗಲು ಸಹ, 20 ವರ್ಷಗಳ ಸತತ ಪ್ರಯತ್ನ-ಪರಿಶ್ರಮದ ಫಲವಾಗಿ, ಶೇಕಡ 80-ರಷ್ಟು ಜನರಿಗೆ, ಅವರಿರುವ ಸ್ಥಳದಿಂದ ಕೇವಲ 150 ಮೀಟರ್‌ಗಳಿಗೂ ಕಡಿಮೆ ದೂರದಲ್ಲಿ, ಕೊಳವೆ ಬಾವಿಯಿಂದ ಕುಡಿಯುವ ನೀರನ್ನು ಒದಗಿಸಲು ಸಾಧ್ಯವಾಗಿರುವುದು ಗಮನಾರ್ಹವಾಗಿದೆ.

ಕೊನೆಯದಾಗಿ, ಕುಟುಂಬ ಯೋಜನೆಯ ಸಾಧನ ವಿಧಾನಗಳನ್ನು, ಪರಿಜ್ಞಾನವನ್ನು ವಿಸ್ತರಿಸಿ-ವ್ಯಾಪಿಸುವಲ್ಲಿಯು ಸಹ, ಗಮನಾರ್ಹವಾದ ಪ್ರಗತಿ ಸಾಧಿಸಲಾಗಿದೆ. ಕೇವಲ ಒಂದೇ ಒಂದು ಪೀಳಿಗೆಯ ಅವಧಿಯಲ್ಲಿ, ಕುಟುಂಬ ಯೋಜನೆಯ ಆಧುನಿಕ ವಿಧಾನಗಳನ್ನು ಅರಿತು-ಬಳಸುತ್ತಿರುವ ವಿವಾಹಿತ ಮಹಿಳೆಯರ ಪ್ರಮಾಣ ಶೇಕಡ 10ಕ್ಕು ಕಡಿಮೆ

ಇದ್ದದ್ದು, ಶೇಕಡ 50ಕ್ಕೆ ಏರಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಇದರ ಪರಿಣಾಮವಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಸಹಜ ಮಹಿಳೆಯೊಬ್ಬಳಿಗೆ ಹುಟ್ಟಬಹುದಾದ ಮಕ್ಕಳ ಸರಾಸರಿ ಪ್ರಮಾಣ 6.00-ಯಿಂದ, 3.7 ಕ್ಕೆ ಇಳಿದಿದೆ. ತೀವ್ರ ಸ್ವರೂಪದ ಈ ಬದಲಾವಣೆ ಜನಸಂಖ್ಯಾ ಶಾಸ್ತ್ರದ ಇತಿಹಾಸದಲ್ಲಿ ಅಭೂತಪೂರ್ವವಾಗಿದ್ದು, ಸುಮಾರು 17 ದೇಶಗಳು, ಕೇವಲ ಒಂದು ಪೀಳಿಗೆಯಲ್ಲಿ ತಮ್ಮ ಜನನಗತಿಯ ದರಗಳನ್ನು ಅರ್ಧದಷ್ಟು ತಗ್ಗಿಸುವಲ್ಲಿ ಯಶಸ್ವಿಯಾಗಿವೆ. ಕುಟುಂಬ ಯೋಜನೆ, ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ನಿಧಾನಗೊಳಿಸುವಲ್ಲಿ ನೆರವಾಗಿದೆಯಲ್ಲದೆ, ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯ ಅತಿಮುಖ್ಯವಾದ ಅಂಶವಾಗಿದೆ. ಕುಟುಂಬಯೋಜನೆ, ತಾಯಿಂದಿರ-ಬಾಣಂತಿಯರ ಸಾವಿನ ಸಂಖ್ಯೆಯನ್ನು ತಗ್ಗಿಸಿದೆ; ಐದು ವರ್ಷಗಳಿಗು ಕಡಿಮೆ ವಯಸ್ಸಿನ ಮಕ್ಕಳ ಪ್ರಮಾಣ ತಗ್ಗಿದೆ; ಮಕ್ಕಳು ಮತ್ತು ಮಹಿಳೆಯರ ಆರೋಗ್ಯ ಸುಧಾರಿಸುವಂತೆ ಮಾಡಿದೆ; ಮಹಿಳೆಯರ ಆರೋಗ್ಯದ ಸುಧಾರಣೆಗೆ ಕಾರಣವಾಗಿದೆ; ಅವರಿಗೆ ಹೆಚ್ಚಿನ ಸಮ ಯಾವಕಾಶಗಳನ್ನು ಕಲ್ಪಿಸಿಕೊಟ್ಟಿದೆ; ಮಕ್ಕಳ ಆರೈಕೆ ಮತ್ತು ಅವರ ಶಿಕ್ಷಣದ ಮೇಲೆ ರಚನಾತ್ಮಕವಾದ ಪ್ರಭಾವಬೀರಿದೆ. ಅಂತಲೇ, ಕುಟುಂಬ ಯೋಜನೆಯನ್ನು ಇತ್ತೀಚಿನ ವರ್ಷಗಳಲ್ಲಿನ ಮಾನವನ ಯೋಗಕ್ಷೇಮದ ಒಂದು ಅತಿ ಮುಖ್ಯ ಘಟಕವೆಂದು ಪರಿಗಣಿಸಲಾಗಿದೆ.

## ನಿಧಾನವಾಗಿರುವ ಪ್ರಗತಿಯ ಗತಿ

ಈ ಎಲ್ಲ ಮಹತ್ ಸಾಧನೆಗಳ ನಡುವೆಯು, ಪ್ರಗತಿಯ ಮೂಲ ಪ್ರಯೋಜನಗಳು ಜನರಿಗೆ ದಕ್ಕುವ ಗತಿ, ನಿಧಾನವಾಗಿದೆ.

ನ್ಯುಮೋನಿಯಾ, ವಿಶ್ವದ ಬಹುತೇಕ ಮಕ್ಕಳ ಸಾವಿಗೆ ಏಕೈಕ ಕಾರಣವಾಗಿದೆ. ಆದಾಗಲೂ, ನ್ಯುಮೋನಿಯಾದಿಂದಾಗಿ ಮಕ್ಕಳು ಸಾಯುವುದನ್ನು ತಡೆಗಟ್ಟುವಲ್ಲಿನ ಪ್ರಗತಿ ನಿಧಾನವಾಗಿದೆ.

ಸುಮಾರು ಹನ್ನೆರಡು ದೇಶಗಳಲ್ಲಿ ನಡೆಸಲಾದ ಅಧ್ಯಯನ ಗಳಿಂದ, ತಂದೆ-ತಾಯಿಗಳಿಗೆ ನ್ಯುಮೋನಿಯಾದ ಮುನ್ ಸೂಚನೆಗಳನ್ನು ಗುರುತಿಸಲು ತಿಳಿಸಿಕೊಟ್ಟಲ್ಲಿ, ಮತ್ತು ಜನ ಸಮುದಾಯದ ಆರೋಗ್ಯ ಕಾರ್ಯಕರ್ತರಿಗೆ ಆ್ಯಂಟಿ ಬಾಯೊಟಿಕ್‌ಗಳ ಬಳಕೆಯ ವಿಷಯದಲ್ಲಿ ಸೂಕ್ತ ತರಬೇತಿ ನೀಡಿದಲ್ಲಿ, ನ್ಯುಮೋನಿಯಾದಿಂದಾಗಿ ಸಾಯುವ ಮಕ್ಕಳ ಪ್ರಮಾಣವನ್ನು ಶೇಕಡ 50-ರಷ್ಟು ತಗ್ಗಿಸಬಹುದೆಂಬುದು ತಿಳಿದುಬಂದಿದೆ. ಈ ದಿಸೆಯಲ್ಲಿ 60 ದೇಶಗಳು ಅಗತ್ಯವಾದ ಯೋಜನೆಗಳನ್ನು ರೂಪಿಸಿರುವುದಾಗಿ ವರದಿಯಾಗಿದ್ದರೂ, ಅಗತ್ಯವಾದ ಪ್ರಮಾಣದಲ್ಲಿ ಯಾವುದೇ ಕ್ರಮ ಕೈಗೊಂಡಂತೆ ಕಂಡುಬರುತ್ತಿಲ್ಲ. ಇದರ ಪರಿಣಾಮವಾಗಿ, ಆಧುನಿಕ ವಿಜ್ಞಾನದ ತೀರ ಸರಳವಾದ ಮತ್ತು ಅಗ್ಗದ ಒಂದು ವಿಧಾನ, ಬಡಜನರ ಮಕ್ಕಳ ಪಾಲಿಗೆ ಇಲ್ಲದಂತಾಗಿ, ಈಗಲು ಸಹ ವರ್ಷಕ್ಕೆ 30 ಲಕ್ಷ ಮಕ್ಕಳು ಸಾಯುತ್ತಿವೆ. ಅಭಿವೃದ್ಧಿಶೀಲ ದೇಶಗಳಲ್ಲಿನ ಪ್ರತಿಹಳ್ಳಿಯಲ್ಲಿ, ನಗರಗಳಲ್ಲಿನ ಮಾರುಕಟ್ಟೆಯಲ್ಲಿ, ಜಟಿಲವಾದ, ದುಬಾರಿಯಾದ, ನಿಷ್‌ಪ್ರಯೋಜಕವಾದ ಮತ್ತು ಹಾನಿಕರವಾದ ಅನೇಕ ಔಷಧಿಗಳನ್ನು ಮಾರಲಾಗುತ್ತಿದೆ; ಆದಾಗಲೂ, ವಿಶ್ವದ ಮಕ್ಕಳ ಸಾವಿಗೆ ಏಕೈಕ ಪ್ರಮುಖ ಕಾರಣ ವಾಗಿರುವ ಒಂದು ರೋಗವನ್ನು ನಿವಾರಿಸಬಲ್ಲ ಅಗ್ಗದ ಮತ್ತು ತೀರ ಸರಳವಾದ ಆ್ಯಂಟಿಬಾಯೊಟಿಕ್, ಅಗತ್ಯವಿರುವ ಜನರಿಗೆ ಸಿಗದಂತೆ ಆಗಿರುವುದು ವಿಷಾದದ ಸಂಗತಿಯಾಗಿದೆ.

ಶರೀರ ನಿರ್ಜಲವಾಗುವುದನ್ನು ತಡೆಗಟ್ಟುವ ಚಿಕಿತ್ಸೆಯ ಪ್ರಗತಿಯು ಸಹ ನಿಧಾನವಾಗಿದೆ. ಈ ಚಿಕಿತ್ಸಾ ವಿಧಾನವಂತೂ, ಬಹುಪಾಲು ಪುಕ್ಕಟೆಯಾಗಿದೆ. ಆದಾಗಲು ಸಹ, ಅಭಿವೃದ್ಧಿಶೀಲ ದೇಶಗಳಲ್ಲಿನ ಮೂರನೆಯ ಒಂದು ಭಾಗದಷ್ಟು ಕುಟುಂಬಗಳಿಗೆ, ಈಗಲು ಸಹ ಈ ಚಿಕಿತ್ಸಾ ವಿಧಾನ ತಿಳಿಯದೆ, ವರ್ಷಕ್ಕೆ ಸುಮಾರು 30 ಲಕ್ಷ ಮಕ್ಕಳು ಅತಿಭೇದಿ-ಅತಿಸಾರದಿಂದ ಸಾಯುತ್ತಿವೆ.

ಈ ರೀತಿ ಸಾಯುವ ಮಕ್ಕಳು, ಉಳ್ಳವರ ಮತ್ತು ಪ್ರಭಾವಶಾಲಿ ಜನರ ಕುಟುಂಬಗಳಿಗೂ ಸಹ ಸೇರಿದ್ದು, ಕಡಿಮೆ ವೆಚ್ಚದ ಮತ್ತು ಪರಿಣಾಮಕಾರಿಯಾದ ಒಂದು ಚಿಕಿತ್ಸಾ ವಿಧಾನವನ್ನು ಕಂಡುಹಿಡಿದ 25 ವರ್ಷಗಳ ನಂತರವು ಇಷ್ಟೊಂದು ಮಕ್ಕಳು ಸಾಯುತ್ತಿರುವುದು ವಿಷಾದದ ಸಂಗತಿಯಾಗಿದೆ. ಅತಿಭೇದಿ-ಅತಿಸಾರದಿಂದ ಮಕ್ಕಳು ಸಾಯುವುದನ್ನು ತಡೆಗಟ್ಟುವ ವಿಷಯದಲ್ಲಿ, ಭೂತಾನ್, ಕ್ಯಾಮರೂನ್, ಕ್ಯೂಬಾ, ಇರಾನ್, ಲಿಬಿಯಾ, ನೈಜಿರಿಯಾ, ಸಿರಿಯಾ, ಸಂಯುಕ್ತ ಅರಬ್-ಅಮಿರಾತ್, ತಾಂಜಾನಿಯಾ, ಉರುಗ್ವೆ, ವೆನಜುಲಾ ಮತ್ತು ಝೂಂಬಿಯಾ-ತೀವ್ರ ಪ್ರಗತಿ ಸಾಧಿಸಿವೆ. ಆದರೆ, ಶೇಕಡ 80-ರಷ್ಟು ಮಕ್ಕಳಿಗೆ ಶರೀರ ನಿರ್ಜಲವಾಗುವುದನ್ನು ತಡೆಗಟ್ಟುವ

# ವಿಶ್ವದ ಮಕ್ಕಳ ಸ್ಥಿತಿಗತಿಗಳು 1994

ಚಿಕಿತ್ಸೆ- ಓ.ಆರ್.ಟಿ.-ಯ ಸೌಲಭ್ಯ ದೊರಕುವಂತೆ ಮಾಡಲು, ಮುಂದಿನ ಎರಡು ವರ್ಷಗಳಲ್ಲಿ ಏನೆಲ್ಲಾ ರೀತಿಯಲ್ಲಿ ಪ್ರಯತ್ನಿಸುವುದು ಅಗತ್ಯವಾಗಿದೆ.

ಗರ್ಭಿಣಿಯರು ಮತ್ತು ನವಜಾತ ಶಿಶುಗಳಲ್ಲಿ ಟೆಟನಸ್ ತಲೆದೋರುವುದನ್ನು ತಡೆಗಟ್ಟುವಲ್ಲಿನ ಪ್ರಗತಿಯು ಸಹ ಈಗ ಕುಂಠಿತಗೊಂಡಿದೆ. 1990-ರಲ್ಲಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಶೇಕಡ 55-ರಷ್ಟು ಗರ್ಭಿಣಿಯರಿಗೆ, ಟೆಟನಸ್‌ಗೆ ಪ್ರತಿಯಾಗಿ ಚುಚ್ಚು ಮದ್ದು ಹಾಕಲಾಗಿತ್ತು. ಆದರೆ, 1993-ರ ವೇಳೆಗೆ, ಈ ಪ್ರಮಾಣ ಶೇಕಡ 40-ಕ್ಕೆ ಇಳಿದಿತ್ತು. ಟೆಟನಸ್ ಟಾಕ್ಸೈಡ ಲಸಿಕೆ, ಕಳೆದ 30 ವರ್ಷಗಳಿಗೂ ಹೆಚ್ಚಿನ ಕಾಲದಿಂದ ಲಭ್ಯವಾಗಿದೆಯಾದರೂ, ಟೆಟನಸ್‌ನಿಂದಾಗಿ, ಪ್ರತೀ ನಿಮಿಷ ಒಂದು ನವಜಾತ ಶಿಶು, ಮತ್ತು ಪ್ರತೀ ಹತ್ತು ನಿಮಿಷ ಒಬ್ಬ ಚೊಚ್ಚಲು ಬಾಣಂತಿ ಅಸುನೀಗುತ್ತಿರುವುದು ಅವಮಾನಕರವಾಗಿದೆ.

ಸರ್ವರಿಗೂ-ಸಾರ್ವತ್ರಿಕವಾಗಿ-ಮೂಲ ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವಲ್ಲಿನ ಪ್ರಗತಿಯು ಸಹ ನಿಧಾನವಾಗಿದೆ. 1960 ಮತ್ತು 1970-ರ ದಶಕಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಟ್ಟದಲ್ಲಿ, ಮಕ್ಕಳನ್ನು ಶಾಲೆಗೆ ಸೇರಿಸುವ ವಿಷಯದಲ್ಲಿ ತೀವ್ರ ಪ್ರಗತಿ ಸಾಧಿಸಲಾಯಿತು. ಆದರೆ, ಆ ನಂತರದ ದಶಕದಲ್ಲಿ ಅನೇಕ ಅಭಿವೃದ್ಧಿಶೀಲ ದೇಶಗಳಲ್ಲಿ- ವಿಶೇಷವಾಗಿ ಆಫ್ರಿಕದ ಸಹಾರಾ ಉಪ ವಿಭಾಗದಲ್ಲಿ, ಶಾಲೆಗೆ ಸೇರಿಸಲಾದ ಮತ್ತು ಓದು ಮುಂದುವರಿಸಿದ ಮಕ್ಕಳ ಸಂಖ್ಯೆ ಮಾತ್ರ ಸ್ಥಗಿತಗೊಂಡಿದೆ. ವಿಶ್ವದ ಬಹುತೇಕ ದೇಶಗಳಲ್ಲಿ, ಮಕ್ಕಳನ್ನು ಶಾಲೆಗೆ ಸೇರಿಸುವ ಮತ್ತು ಅವರು ಶಾಲೆಗೆ ಹೋಗುವುದನ್ನು ನಿಲ್ಲಿಸದೆ ಮುಂದುವರಿಸುವಂತೆ ನೋಡಿಕೊಳ್ಳುವುದು ಸಮಸ್ಯೆಯಾಗಿದೆ. ಅಭಿವೃದ್ಧಿಶೀಲ ದೇಶಗಳಲ್ಲಿನ ಶೇಕಡ 90-ರಷ್ಟು ಮಕ್ಕಳು ಪ್ರಾಥಮಿಕ ಶಾಲೆಯ ಮೊದಲನೆಯ ತರಗತಿಯಲ್ಲಿ ಪ್ರವೇಶ ಪಡೆದರೂ, ಶಾಲೆಗೆ ಹೋಗುವುದನ್ನು ಮುಂದುವರಿಸುವ ಮಕ್ಕಳ ಪ್ರಮಾಣ ಮೂರನೆಯ ಎರಡು ಭಾಗಕ್ಕೂ ಕಡಿಮೆಯಾಗಿದೆ.

## ವಾಗ್ದಾನಗಳು ಮತ್ತು ಒತ್ತಡಗಳು

2000ನೆಯ ಇಸವಿಯವೇಳೆಗೆ, ಮಾನವನ ಮೂಲ ಅವಶ್ಯಕತೆಗಳನ್ನು ಈಡೇರಿಸುವ ಗುರಿ ತಲುಪಲು ಸಾಧ್ಯವಾದಲ್ಲಿ, ಇತಿಹಾಸಕಾರ ಅರನಾಲ್ಡ್ ಟಾಯನ್‌ಬೀ, ತಮ್ಮ ಲೇಖನವೊಂದರಲ್ಲಿ ವ್ಯಕ್ತಪಡಿಸಿದ ಭರವಸೆ-ವಿಶ್ವಾಸದತ್ತ ದಾಪುಗಾಲು ಹಾಕಿದಂತಾಗುತ್ತದೆ. ಟಾಯನ್‌ಬೀ, ಶೀತಲ ಸಮರ ಆರಂಭವಾಗುವುದಕ್ಕು ಮುಂಚೆ- ''ಉತ್ತಮ ನಾಗರಿಕತೆಯ ಸಕಲ ಸೌಲಭ್ಯಗಳು- ಪ್ರಯೋಜನಗಳು ಇಡೀ ಮಾನವ ಕುಲ ಕೋಟಿಗೆ ಲಭ್ಯವಾಗುವಂತೆ ಮಾಡುವ ಅವಕಾಶಗಳು ವಾಸ್ತವಿಕವಾಗಿ ಏರ್ಪಟ್ಟಿರುವುದನ್ನು ನಂಬಿ, ಕಣ್ಣಾರೆ ಕಾಣುತ್ತಿರುವ ಪೀಳಿಗೆ- ಎಂದರೆ, ಇಡೀ ಇತಿಹಾಸದಲ್ಲಿ ನಮ್ಮದೇ ಆಗಿದೆ''- ಎಂದು ಹೇಳಿದ್ದು ಬಹುಪಾಲು ನಿಜವಾಗಿದೆ.

ಅಂಗೀಕೃತ ಕಟ್ಟಳೆಗಳಿಗೆ- ಒಡಂಬಡಿಕೆಗಳಿಗೆ ಸಾಕಷ್ಟು ಪ್ರಾಧಾನ್ಯತೆ ನೀಡದೇ ಇದ್ದಲ್ಲಿ, ಈಗ ಏರ್ಪಟ್ಟಿರುವ ಅವಕಾಶಗಳು, ಹುಟ್ಟಿಕೊಂಡಿರುವ ನಂಬಿಕೆ- ವಿಶ್ವಾಸ ಹುಸಿಯಾಗುವ ಅಪಾಯವು ಇದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಅಂಗೀಕೃತವಾಗಿ ಅಂಗೀಕರಿಸಿ, ಸೂಕ್ತವಾದ ರಾಷ್ಟ್ರೀಯ ಕಾರ್ಯಕ್ರಮಗಳನ್ನು ರೂಪಿಸಿದ ಮಾತ್ರಕ್ಕೆ ಏನನ್ನೇ ಆಗಲಿ ಸಾಧಿಸಲಾಗದು. ಈ ಕಾರ್ಯಕ್ರಮಗಳಿಗೆ ಸಾರ್ವಜನಿಕರ- ವಿಶೇಷವಾಗಿ, ಸರ್ಕಾರೇತರ ಸಂಘ ಸಂಸ್ಥೆಗಳ, ಸಂಪರ್ಕ ಮಾಧ್ಯಮಗಳ, ರಾಜಕೀಯ ಮತ್ತು ಧಾರ್ಮಿಕ ಮುಖಂಡರ, ವೃತ್ತಿಪರ ಮಂಡಳಿಗಳ, ವಾಣಿಜ್ಯೋದ್ಯಮಿಗಳ, ಶಿಕ್ಷಣವೆತ್ತರ ಮತ್ತು ಅಧ್ಯಾಪಕರ ಬೆಂಬಲ- ಸಮರ್ಥನೆ ಸಿಗುವುದು ಅತ್ಯಾವಶ್ಯಕವಾಗಿದೆ.

ಕೈಗಾರಿಕಾ ಕ್ಷೇತ್ರದಲ್ಲಿ ಮುಂದುವರಿದ ದೇಶಗಳು, ತಾವು ನಿಡುತ್ತಿರುವ ನೆರವಿನಲ್ಲಿ ಶೇಕಡ 20-ರಷ್ಟು ಮೊತ್ತವಾದರೂ ಕಡುಬಡವರ ಮೂಲ ಅವಶ್ಯಕತೆಗಳನ್ನು ಈಡೇರಿಸುವ ಕಾರ್ಯಕ್ರಮಗಳಿಗಾಗಿ ವಿನಿಯೋಗಿಸಿಕೊಳ್ಳುವುದನ್ನು ಖಚಿತಮಾಡಿಕೊಳ್ಳಬೇಕು. ಈಗಿರುವ ನೆರವು ಕಾರ್ಯಕ್ರಮಗಳು, ಶೀತಲ ಸಮರದ ಕಾಲದಲ್ಲಿ ಇದ್ದಂತೆಯೇ ಇವೆ. ಅಮೆರಿಕ, ವಿದೇಶಗಳಿಗೆ ನೀಡುತ್ತಿರುವ ನೆರವಿನಲ್ಲಿ ಶೇಕಡ 25-ರಷ್ಟು ಮೊತ್ತ ಮಿಲಿಟರಿ ನೆರವಾಗಿದೆ. ಇಷ್ಟೇ ಅಲ್ಲದೆ 1994ನೇ ಸಾಲಿಗಾಗಿ, ಅಮೆರಿಕ ಇತರ ದೇಶಗಳಿಗೆ ನೆರವಿನ ರೂಪದಲ್ಲಿ ಒದಗಿಸಲು ನಿಗದಿಮಾಡಿರುವ ಮೊತ್ತದಲ್ಲಿ, ಶೇಕಡ 25-ರಷ್ಟು ಮೊತ್ತ, ಮಿಲಿಟರಿ ಏತರ ನೆರವಿನ ರೂಪದಲ್ಲಿ ಈಜಿಪ್ಟ್, ಇಜರೈಲ್ ಮತ್ತು ಈ ಮುಂಚೆ ಅಸ್ತಿತ್ವದಲ್ಲಿದ್ದು ಈಗ ಒಡೆದು ಹೋಗಿರುವ ಸೋವಿಯತ್ ದೇಶಗಳಿಗೆ ದೊರೆಯಲಿದೆ.

ಅಭಿವೃದ್ಧಿ ಶೀಲ ದೇಶಗಳಿಗಾಗಿ ನಿಗದಿಯಾಗಿರುವ ಮೊತ್ತ ಮಾತ್ರ ಸುಮಾರು 650 ಕೋಟಿ ಡಾಲರ್‌ಗಳಾಗಿದೆ. ಐತಿಹಾಸಿಕ ಒಲವು-ಒತ್ತಡಗಳು, ಹಾಗೂ, ವಾಣಿಜ್ಯಕ ಶಿಷ್ಟಾಚಾರಗಳಿಂದಲು ಸಹ, ನೆರವಿನಲ್ಲಿ ಶೇಕಡ 25-ರಷ್ಟು ಮೊತ್ತ ಮಾತ್ರ, ವಿಶ್ವದ ಶೇಕಡ 75-ರಷ್ಟು ಕಡು ಬಡವರನ್ನು ಹೊಂದಿದ ಹತ್ತು ದೇಶಗಳಿಗೆ ದೊರೆಯುತ್ತಿದೆ.

ಶೀತಲ ಸಮರ ಕೊನೆಗೊಂಡಾಗ, ಬಡಜನರ ಮೂಲ ಸಮಸ್ಯೆಗಳ ಪರಿಹಾರಕ್ಕೆ, ಸಾಕಷ್ಟು ಪ್ರಮಾಣದಲ್ಲಿ ಹಣಕಾಸಿನ ಸಂಪನ್ಮೂಲಗಳು ಲಭ್ಯವಾಗುತ್ತವೆಂದು ನಂಬಲಾಗಿತ್ತು. ಆದರೆ, ಆ ನಂಬಿಕೆ ಹುಸಿಯಾಗಿ, ವಿಶ್ವದ ಬಡ ರಾಷ್ಟ್ರಗಳಲ್ಲಿ ಮತ್ತು ಅಭಿವೃದ್ಧಿಯ ಪ್ರಯತ್ನಗಳಲ್ಲಿ, ಈಗ ತೀವ್ರ ಸ್ವರೂಪದ ಹಣಕಾಸಿನ ಬಿಕ್ಕಟ್ಟು ತಲೆದೋರಿದೆ. ಪೂರ್ವ ಐರೋಪ್ಯ ದೇಶಗಳಿಗೆ, ಮತ್ತು ಈ ಮುಂಚೆ ಸೋವಿಯಟ್ ಒಕ್ಕೂಟಕ್ಕೆ ಸೇರಿದ್ದ ದೇಶಗಳಿಗೆ, ಈಗ ಹೆಚ್ಚಿನ ನೆರವಿನ ಬಂಡವಾಳದ ಅವಶ್ಯಕತೆ ಇದೆಯಲ್ಲದೆ, ಹಲವಾರು ಪ್ರಮುಖ ಕೈಗಾರಿಕಾ ದೇಶಗಳಲ್ಲಿ ಅಭೂತಪೂರ್ವವಾದ ಪ್ರಮಾಣದಲ್ಲಿ ಹಣಕಾಸಿನ ಕೊರತೆ ತಲೆದೋರಿದೆ. ಇದರ ಜೊತೆಗೆ, ಶಾಂತಿಪಾಲನಾ ಚಟುವಟಿಕೆಗಳು ಹೆಚ್ಚಿವೆ. ಈ ಎಲ್ಲಾ ಕಾರಣಗಳಿಂದಾಗಿ, ವಿಶ್ವದ ಬಡದೇಶಗಳ ಪಾಲಿಗೆ ನೆರವು, ಸಾಲ ಮತ್ತು ಬಂಡವಾಳದ ಸವಲತ್ತುಗಳು ಕುಗ್ಗಿ ಹೋಗಿವೆ. ಇದೇ ಸಮಯದಲ್ಲಿ, ಬಡದೇಶಗಳ ಆರ್ಥಿಕ ವ್ಯವಸ್ಥೆಗಳಿಗೆ ಮೂಲಾಧಾರವಾಗಿರುವ ಕಚ್ಚಾವಸ್ತುಗಳ ಬೆಲೆಗಳು ತಗ್ಗುತ್ತಿದ್ದು, ಅವುಗಳ ಸಾಲದ ಹೊರೆ ಮಾತ್ರ ಹೆಚ್ಚುತ್ತಿದೆ. ಇದಿಷ್ಟೇ ಸಾಲದು ಎಂಬಂತೆ, ಆದ್ಯತೆಗಳು ಮತ್ತು ಸಂಪನ್ಮೂಲಗಳ ಈ ಸಮಸ್ಯೆಗಳಿಗೆ ಮೀರಿದಂತೆ, ಪ್ರಗತಿಯ ಮೂಲ ಪ್ರಯೋಜನಗಳು, ಎಲ್ಲಾ ಜನ ಸಮುದಾಯದವರಿಗೂ ದಕ್ಕುವಂತೆ ಮಾಡುವ ಪ್ರಯತ್ನಗಳಿಗೆ ದೀರ್ಘಾವಧಿಯ ಬೆದರಿಕೆ ತಲೆದೋರಿದೆ. ಮುಂಬರುವ ವರ್ಷಗಳಲ್ಲಿ, ಕಡುಬಡತನ, ತೀವ್ರಗತಿಯಲ್ಲಿ ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಪರಿಸರದ ಮೇಲಿನ ಒತ್ತಡ- ಇವೇ ಮುಂತಾದ ಕಾರಣಗಳಿಂದಾಗಿ, ಹಿಂದಿನ ಸಾಧನೆಗಳು ಹಾಗೂ ಈಗ ಲಭ್ಯವಿರುವ ಸಾಮರ್ಥ್ಯಗಳಿಗೆ ಬೆದರಿಕೆ ತಲೆದೋರಿದ್ದು ಸ್ಪಷ್ಟವಾಗಿದೆ. ಈ ಹಿನ್ನಲೆಯಲ್ಲಿ, ವಿಶ್ವದ ಮಕ್ಕಳ ಸ್ಥಿತಿಗತಿಗಳ ವರದಿಯಲ್ಲಿ, 21ನೆಯ ಶತಮಾನದಲ್ಲಿ ಮಾನವನ ಮುಂದೆ ಉದ್ಭವಿಸಬಹುದಾದ ಸಮಸ್ಯೆಗಳ ಸಂದರ್ಭಗಳನ್ನು ಮುಂದಿಟ್ಟುಕೊಂಡು, 2000ನೆಯ ಇಸವಿಗಾಗಿ ನಿಗದಿಯಾಗಿರುವ ಗುರಿಗಳನ್ನು ತಲುಪಲು ನಿರಂತರ ಹೋರಾಟ ನಡೆಯಬೇಕೆಂದು ಸೂಚಿಸಲಾಗಿದೆ.

## ಶೀತಲ ಸಮರದ ಸ್ವತ್ತು

ಶೀತಲ ಸಮರ, ಮಾನವನ ಇತಿಹಾಸದಲ್ಲಿ ಇದುವರೆಗೆ ಸಂಭವಿಸಿರುವ ಯಾವುದೇ ಸಮರಕ್ಕಿಂತ, ಮತ್ತು ಮುಂದೆ ಸಂಭವಿಸಬಹುದಾದ ಸಮರಕ್ಕಿಂತ- ಹೆಚ್ಚು ವಿನಾಶಕಾರಿಯಾಗಿದೆ. ಶೀತಲ ಸಮರ, ವಿಶ್ವದ ಅನೇಕ ದೇಶಗಳಲ್ಲಿ, ಮಿಲಿಟರಿ ಆಡಳಿತ ವ್ಯವಸ್ಥೆಗಳಿಗೆ ಪೋಷಣೆ ನೀಡಿತಲ್ಲದೆ, ಮಾನವ ಹಕ್ಕುಗಳನ್ನು ಧಿಕ್ಕರಿಸಿ, ಮಾನವನ ಅವಶ್ಯಕತೆಗಳನ್ನು ಕಡೆಗಂಡು, ಮಾನವ ಮತ್ತು ಪರಿಸರದ ತುರ್ತು ಸಮಸ್ಯೆಗಳನ್ನು ಅಲಕ್ಷ್ಯ ಮಾಡಿ ವಿಪುಲವಾದ ಸಂಪನ್ಮೂಲಗಳ ದುರ್ವಿನಿಯೋಗಕ್ಕೆ ನಾಂದಿಯಾಗಿತ್ತು. ಅದರ ಪರಿಣಾಮವಾಗಿ ಹುಟ್ಟಿಕೊಂಡ ಸಮಸ್ಯೆಗಳು ಹೆಚ್ಚು ಗಂಭೀರವಾಗಿ ಬೆಳೆದು ನಿಂತಿವೆ. ಅವುಗಳಲ್ಲಿ ಹಲವು ಸಮಸ್ಯೆಗಳನ್ನು ಇಲ್ಲಿ ನಿರೂಪಿಸಲಾಗಿದೆ.-

- ವಿಶ್ವದ ಜನ ಸಂಖ್ಯೆಯಲ್ಲಿ ಐದನೆಯ ಒಂದು ಭಾಗದಷ್ಟು ಜನರು, ಈಗ ಕಡುಬಡತನದಲ್ಲಿ ಜೀವಿಸುತ್ತಿದ್ದಾರೆ. ಈ ನೂರಾರು ಕೋಟಿ ಬಡಜನರಲ್ಲಿ, ಅಧಿಕ ಸಂಖ್ಯೆಯ ಜನರು ವಾಸಿಸುತ್ತಿರುವ ಪರಿಸರ, ತೀವ್ರಗತಿಯಲ್ಲಿ ಹಾಳಾಗುತ್ತಿದೆ. ಆ ಜನರು ಹತಾಶ ಜೀವನ ನಡೆಸುತ್ತಿದ್ದಾರೆ. ಇದು ಸಾಲದು ಎಂಬಂತೆ, ಸಂಪರ್ಕ ಕ್ಷೇತ್ರದಲ್ಲಿನ ಪ್ರಗತಿಸಾಧನೆಗಳಿಂದಾಗಿ, ವಿಶ್ವದ ಇತರ ಭಾಗಗಳಲ್ಲಿನ ಜನರು ಸಾಧಿಸಿರುವ ಪ್ರಗತಿ- ಸುಖ ಸಮೃದ್ಧಿಯನ್ನು ಕಂಡು, ಬಡ ಜನರು ಕಂಗಾಲಾಗುತ್ತಿದ್ದಾರೆ.
- ಜನಸಂಖ್ಯೆಯ ಬೆಳವಣಿಗೆಯ ಗತಿ, ಈಗಿನಂತೆಯೇ ಮುಂದುವರಿದಲ್ಲಿ, ಕೇವಲ ಒಂದು ಜೀವ ಮಾನದಲ್ಲಿ ಬಡವರ ಸಂಖ್ಯೆ ನಾಲ್ಕು ಪಟ್ಟು ಹೆಚ್ಚುವ ಸಾಧ್ಯತೆಗಳಿವೆ. ಮುಂದಿನ 40 ವರ್ಷಗಳಲ್ಲಿ, ಆಫ್ರಿಕದ ಸಹಾರಾ ಉಪಭಾಗದಲ್ಲಿನ ಜನ ಸಂಖ್ಯೆ, 64 ಕೋಟಿಯಿಂದ, 160-ಕೋಟಿಗೆ ಹೆಚ್ಚುವ ಸಾಧ್ಯತೆಗಳಿವೆ. ಇದೇ ಸಮಯದಲ್ಲಿ, ಏಷಿಯಾದ ದೇಶಗಳ ಜನಸಂಖ್ಯೆ 300 ಕೋಟಿಯಿಂದ 500 ಕೋಟಿಗೆ ಹೆಚ್ಚುವ ಸಾಧ್ಯತೆಗಳಿವೆ.

● ಕೈಗಾರಿಕಾ ದೇಶಗಳ ಸಂಪನ್ಮೂಲಗಳ ಬಳಕೆಯ ವಿಧಾನ, ಮತ್ತು, ಕಲುಷಿತಗೊಳ್ಳುತ್ತಿರುವ ಪರಿಸರ, ಜೈವಿಕ ವಾತಾವರಣದ ವಿನಾಶಕ್ಕೆ ಮಾರ್ಗವಾಗಿದ್ದು, ಮುಂಬರುವ ದೇಶಗಳು ಸಹ, ಇವೇ ವಿಧಾನಗಳನ್ನು ಅನುಸರಿಸಿದಲ್ಲಿ ಏನಾಗಬಹುದೊ ಹೇಳಲಾಗದು. ವಿಶ್ವದ ಜನಸಂಖ್ಯೆಯಲ್ಲಿ, ಸುಮಾರು ಶೇಕಡ 20-ರಷ್ಟು ಜನಸಂಖ್ಯೆಯನ್ನು ಹೊಂದಿರುವ ಕೈಗಾರಿಕಾ ದೇಶಗಳು, ಸಧ್ಯಕ್ಕೆ ವಿಶ್ವದ ಇಂಧನ-ವಿದ್ಯುಚ್ಛಕ್ತಿಯ ಮೂಲಗಳಲ್ಲಿ ಶೇಕಡ 75-ರಷ್ಟು ಸಂಪನ್ಮೂಲಗಳನ್ನು ಬಳಸಿಕೊಳ್ಳುತ್ತಿವೆ; ಸಸ್ಯ ಅನಿಲಗಳಲ್ಲಿ ಮೂರನೆಯ ಎರಡು ಭಾಗದಷ್ಟು, ಮತ್ತು ಭೂಮಿಯನ್ನು ರಕ್ಷಿಸುತ್ತಿರುವ ಓಜೋನ್ ಪದರು ಹಾಳಾಗುವುದಕ್ಕೆ ಕಾರಣವಾಗಿರುವ ಶೇಕಡ 90-ರಷ್ಟು ಕ್ಲೋರೊಫ್ಲೋರೊ ಕಾರಬನ್‌ಗಳ ಉತ್ಪತ್ತಿಗೆ ಕಾರಣವಾಗಿವೆ.

ಶೀತಲ ಸಮರದ ವಿನಾಶಕಾರಿ ಪರಿಣಾಮಗಳು ಮತ್ತು ವಿಕಾರಗಳಿಂದ ಮುಕ್ತಿ ಪಡೆದು ಮುನ್ನಡೆಯುತ್ತಿರುವ ಮಾನವ ಸಮಾಜ, ಈಗಲಾದರೂ, ಮಿಲಿಟರಿ ಮತ್ತು ತತ್ತ್ವಾಧಾರಗಳ ಅಪೇಕ್ಷೆಯಿಂದ, ಅನೇಕ ವರ್ಷಗಳಿಂದ ಉಪೇಕ್ಷಿಸಲಾದ ಸಮಸ್ಯೆಗಳಿಗೆ ಗಮನ ನೀಡಿ, ವಿಶ್ವವನ್ನು ವಿನಾಶದಿಂದ ಪಾರು ಮಾಡುವ ಬಗ್ಗೆ ಕಾಳಜಿ ವಹಿಸುವುದೆಂದು ನಂಬಲಾಗಿದೆ.

### ಬಡತನ ಮತ್ತು ಬೆಳೆಯುತ್ತಿರುವ ಜನಸಂಖ್ಯೆ

ಅಭಿವೃದ್ಧಿಯ ಪ್ರಯತ್ನಗಳಿಗೆ ಅಷ್ಟೊಂದು ಸಮರ್ಥನೆ ನೀಡದೇ ಇರುವ ಅಂತರರಾಷ್ಟ್ರೀಯ ಆರ್ಥಿಕ ಚೌಕಟ್ಟಿನಲ್ಲಿ, ವಿಶ್ವದ ಕೋಟ್ಯಾಂತರ ಬಡಜನರ ಬಾಳಿಗೆ, ಬಡತನ, ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಬಿಗಡಾಯಿಸುತ್ತಿರುವ ಪರಿಸರದ ಪರಸ್ಪರ ಪೂರಕವಾದ ಸಮಸ್ಯೆಗಳು, ಕುತ್ತಾಗಿ ಪರಿಣಮಿಸಿವೆ. ಒಂದಕ್ಕೊಂದು ಪೂರಕವಾಗಿರುವ-ಒಂದರ ಮೇಲೊಂದು ಆಧಾರಗೊಂಡಿರುವ- ಈ ಸಮಸ್ಯೆಗಳನ್ನು ಪ್ರತ್ಯೇಕವಾಗಿ ಪರಿಗಣಿಸುವುದು, ಅವುಗಳಿಂದಾಗಿ ತಲೆದೋರುವ ಅಪಾಯ-ಬೆದರಿಕೆಯನ್ನು ಅರ್ಥಮಾಡಿಕೊಳ್ಳದೇ ಇರುವುದು ತೀರ ತಪ್ಪಾಗುತ್ತದೆ. ಈ ವಿಷಯಗಳನ್ನು ಬಡತನ, ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಬಿಗಡಾಯಿಸುತ್ತಿರುವ ಪರಿಸರದ ಸಮಸ್ಯೆಗಳೆಂದೇ ಪ್ರಸ್ತಾಪಿಸಲಾಗಿದೆ.

ಬಿಬಿಬಿ-ಸುಳಿಯಲ್ಲಿನ ಮೊದಲ ಸುತ್ತು-ಮೊದಲ ಅಂಶ ಬಡತನ ಮತ್ತು ಬೆಳೆಯುತ್ತಿರುವ ಜನಸಂಖ್ಯೆಯ ನಡುವಣ ಸಂಬಂಧವಾಗಿದೆ. ಜನ ಸಂಖ್ಯೆಯ ಬೆಳವಣಿಗೆಯ ಮುಖ್ಯ ಕಾರಣಗಳು ಇಂತಿವೆ-

- ಆರೋಗ್ಯ ಆರೈಕೆಯಲ್ಲಿನ ಪ್ರಗತಿ ಕುಂಠಿತವಾಗಿರುವುದರಿಂದ, ತಂದೆ-ತಾಯಿಗಳು, ಮಕ್ಕಳ ಮರಣ ಪ್ರಮಾಣ ಹೆಚ್ಚಾಗಿರುವುದನ್ನು ದೃಷ್ಟಿಯಲ್ಲಿಟ್ಟುಕೊಂಡು, ಹೆಚ್ಚಿಗೆ ಮಕ್ಕಳನ್ನು ಹೊಂದಲು ಇಚ್ಛಿಸಬಹುದು;
- ಹೆಚ್ಚಿನ ಅವಕಾಶಗಳನ್ನು ಪಡೆಯದ ಮತ್ತು ವಿದ್ಯೆ ಇಲ್ಲದ ಮಹಿಳೆಯರು, ಹಾಗೂ, ಸಣ್ಣ ವಯಸ್ಸಿನಲ್ಲಿ ಮದುವೆಯಾಗಿ ಪದೆ-ಪದೆ ಮಕ್ಕಳನ್ನು ಹೆರುವುದು;
- ಆರ್ಥಿಕ ಸುಭದ್ರತೆ-ಸುರಕ್ಷತೆಯ ಕೊರತೆಯಿಂದಾಗಿ, ವೃದ್ಧಾಪ್ಯದಲ್ಲಿ ಇಲ್ಲವೆ ಅನಾರೋಗ್ಯದ ದಿನಗಳಲ್ಲಿ ಮಕ್ಕಳು ನೆರವಾಗಬಲ್ಲರೆಂಬ ಭಾವನೆಯಿಂದ ಹೆಚ್ಚು ಮಕ್ಕಳನ್ನು ಹೊಂದುವುದು;
- ಮೂಲಭೂತವಾದ ಸೇವಾ ಸೌಲಭ್ಯಗಳು ಮತ್ತು ಶ್ರಮವನ್ನು ತಗ್ಗಿಸಬಲ್ಲ ತಾಂತ್ರಿಕ ಸವಲತ್ತುಗಳು ಇಲ್ಲದೇ ಇರುವುದರಿಂದ, ನೀರಿನ ನಲ್ಲಿಗಳು, ಕೈ ಪಂಪ್‌ಗಳು, ಇಂಧನವನ್ನು ಉಳಿಸಬಲ್ಲ ಸ್ಟೋವ್‌ಗಳು, ಗಿರಣಿಗಳು-ಇಲ್ಲದೇ ಇರುವುದರಿಂದ, ಹಾಗೂ, ಹೊಲಗದ್ದೆಗಳಲ್ಲಿ ಮತ್ತು ಮನೆಯ ಕೆಲಸದಲ್ಲಿ ಮಕ್ಕಳು ನೆರವಾಗಬಲ್ಲರೆಂಬ ವಿಶ್ವಾಸದಿಂದ ಹೆಚ್ಚಿನ ಮಕ್ಕಳನ್ನು ಹೊಂದುವುದು;
- ಭವಿಷ್ಯದ ಬಗ್ಗೆ ಹೆಚ್ಚಿನ ವಿಶ್ವಾಸ-ನಂಬಿಕೆ ಇಲ್ಲದೆ, ಸಾಮಾನ್ಯವಾಗಿ ಜೀವನದ ವೈಖರಿಯ ಬಗ್ಗೆ, ವಿಶೇಷವಾಗಿ ಕುಟುಂಬ ಯೋಜನೆಯ ಬಗ್ಗೆ ಅಷ್ಟೊಂದು ಆಸಕ್ತಿ-ಚಿಂತೆಹೊಂದದೇ ಇರುವುದು;
- ಸಣ್ಣ ಕುಟುಂಬದ-ಚೊಕ್ಕ ಪರಿವಾರದ ಪ್ರಯೋಜನಗಳನ್ನು ಅರಿತರು ಸಹ, ಕುಟುಂಬ ಯೋಜನೆಯ ಬಗ್ಗೆ ಅಗತ್ಯವಾದ ಮಾಹಿತಿ ಮತ್ತು ಸೇವಾ ಸೌಲಭ್ಯಗಳನ್ನು ಹೊಂದಿರದೇ ಇರುವುದು ಸಹ, ಬೆಳವಣಿಗೆಯ ಗತಿ ಹೆಚ್ಚಿರುವುದಕ್ಕೆ ಕಾರಣವಾಗಿದೆ.

### ಬೆನ್ನು ಬಿಡದ ಬಡತನ

ಬಡತನ, ಬೆಳೆಯುತ್ತಿರುವ ಜನಸಂಖ್ಯೆಯ ಗತಿಯನ್ನು ತೀವ್ರಗೊಳಿಸುತ್ತದೆ; ಮತ್ತು, ಬೆಳೆಯುತ್ತಿರುವ ಜನ ಸಂಖ್ಯೆ,

ಬಡತನಕ್ಕೆ ಮೂಲ ಕಾರಣವಾಗಿ ಪರಿಣಮಿಸುತ್ತದೆ-

- ಬೆಳೆಯುತ್ತಿರುವ ಜನಸಂಖ್ಯೆ, ನಿರುದ್ಯೋಗಿಗಳ ಮತ್ತು ಸಂಪೂರ್ಣ ಉದ್ಯೋಗ ಹೊಂದದೇ ಇರುವವರ ಸಂಖ್ಯೆ ಹೆಚ್ಚುವುದಕ್ಕೆ, ಹಾಗೂ, ಕೆಲಸ ಸಿಕ್ಕರೂ ಕಡಿಮೆ ಕೂಲಿ-ಕಡಿಮೆ ವೇತನಕ್ಕೆ ಕಾರಣವಾಗುತ್ತಿದೆ.
- ಹೆಚ್ಚಿನ ಮಕ್ಕಳನ್ನು ಹೆತ್ತಲ್ಲಿ, ಪಿತ್ರಾರ್ಜಿತ ಆಸ್ತಿ, ಭೂಮಿ, ಸಣ್ಣ-ಸಣ್ಣ ಹಿಡುವಳಿಗಳಲ್ಲಿ ಹಂಚಿಹೋಗುತ್ತದೆ. ಅದರ ಪರಿಣಾಮವಾಗಿ ಭೂ-ಮಾಲೀಕತ್ವದಲ್ಲಿ ಅಸಮಾನತೆಗಳು ತಲೆದೋರಿ, ಗ್ರಾಮಗಳಲ್ಲಿನ ಲಕ್ಷಾಂತರ ಜನರು ಭೂಮಿ ಇದ್ದರೂ ಇಲ್ಲದಂತಹ, ಇಲ್ಲವೆ, ಭೂರಹಿತರಾಗಿ ಬಾಳುವ ಗತಿ ಏರ್ಪಟ್ಟು, ಆಹಾರ, ಇಂಧನ, ಕೆಲಸ ಮತ್ತು ಗಳಿಕೆ ಇಲ್ಲದೆ, ತಮ್ಮ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಅಸಮರ್ಥರಾಗುತ್ತಿದ್ದಾರೆ.
- ಹೆಚ್ಚುತ್ತಿರುವ ಜನಸಂಖ್ಯೆ, ಆರೋಗ್ಯ ಮತ್ತು ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವ ಖರ್ಚು-ವೆಚ್ಚ ಹೆಚ್ಚುವುದಕ್ಕೆ ಕಾರಣವಾಗಿ, ಶಾಲೆಗಳು, ಚಿಕಿತ್ಸಾಲಯಗಳು ಮತ್ತು ನೀರು ಹಾಗೂ ನೈರ್ಮಲ್ಯ ವ್ಯವಸ್ಥೆಗಳ ಮೇಲೆ ಹೆಚ್ಚಿನ ಒತ್ತಡ ಬೀಳುವುದಕ್ಕೂ ಕಾರಣವಾಗಿ, ಸರ್ಕಾರಿ ಖರ್ಚು-ವೆಚ್ಚಗಳು ಹೆಚ್ಚುವುದಕ್ಕೆ ಮಾರ್ಗಮಾಡಿಕೊಡುತ್ತಿವೆ;
- ಹೆಚ್ಚುತ್ತಿರುವ ಜನಸಂಖ್ಯೆ, ನಗರಗಳಲ್ಲಿನ ಕೊಳಚೆ ಪ್ರದೇಶಗಳ- ಗುಡಿಸಲು ವಾಸಿಗಳ ಜೀವನದ ಗುಣಮಟ್ಟ ತಗ್ಗುವುದಕ್ಕೆ ಕಾರಣವಾಗುತ್ತಿದೆ. ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಜನರ ಸಂಖ್ಯೆ ಹೆಚ್ಚುತ್ತಿದ್ದು, ಅದರಿಂದ ರೋಗರುಜಿನಗಳು ಹುಟ್ಟಿಕೊಳ್ಳುತ್ತಿವೆಯಲ್ಲದೆ, ಅಲ್ಲಿನ ಜನರು ಸ್ವಾಭಿಮಾನವಿಲ್ಲದ ಹತಾಶ ಜೀವನ ನಡೆಸುತ್ತಿದ್ದಾರೆ. ಕೌಟುಂಬಿಕ ಸಂಬಂಧಗಳು ಕಡಿದುಹೋಗಿ, ಸೆರೆ-ಶೇಂದಿ, ಮಾದಕ ವಸ್ತುಗಳ ಬಳಕೆಗೆ, ಹಿಂಸಾಚಾರಗಳಿಗೆ ಪುಷ್ಟಿದೊರೆತು, ಮಹಿಳೆಯರು ಮತ್ತು ಮಕ್ಕಳು ನಿರ್ಗತಿಕರಾಗಿ, ಅನಾಥರಾಗಿ ಬಾಳುವ ಸ್ಥಿತಗತಿಗಳು ಏರ್ಪಡುತ್ತಿವೆ.

ಇಷ್ಟೇ ಅಲ್ಲದ, ಕುಟುಂಬವೊಂದರಲ್ಲಿ ಹೆಚ್ಚಿನ ಜನರಿದ್ದಲ್ಲಿ- ಹೆಚ್ಚಿನ ಮಕ್ಕಳಿದ್ದಲ್ಲಿ- ಎಲ್ಲರ ಅಗತ್ಯ-ಅವಶ್ಯಕತೆಗಳನ್ನು ಈಡೇರಿಸಲು, ಎಲ್ಲರ ಆರೋಗ್ಯ-ಆರೈಕೆಗೆ ಗಮನ ನೀಡಲು ಸಾಧ್ಯವಾಗದೇ ಹೋಗಬಹುದು. ತಾಯಿಂದಿರಿಗೆ, ಉತ್ಪಾದಕ ಕೆಲಸ-ಕಾರ್ಯಗಳಲ್ಲಿ ತೊಡಗಿ ಅಷ್ಟು-ಇಷ್ಟು ಹಣಗಳಿಸಲು ಸಹ ಸಾಧ್ಯವಾಗದೇ ಹೋಗಬಹುದು.

ಒಟ್ಟಿನಲ್ಲಿ, ಬೆಳೆಯುತ್ತಿರುವ ಜನಸಂಖ್ಯೆ, ಬಡತನವನ್ನು ಮತ್ತಷ್ಟು ಅಸಹನೀಯಗೊಳಿಸುತ್ತದೆ; ಬಡತನ, ಜನಸಂಖ್ಯೆ ಹೆಚ್ಚುವುದಕ್ಕೆ ಪ್ರೇರಕವಾಗಿ, ಇದೊಂದು ವಿಷಮ ಚಕ್ರವಾಗಿ ಪರಿಣಮಿಸುತ್ತಿದೆ.

ಬಬೆಬಿ-ಯ ಅವನತಿಯ ಸುಳಿಯಲ್ಲಿ, ಇದೇ ಒಂದು ಮುಖ್ಯ ಕೊಂಡಿಯಾಗಿದೆ- ಪ್ರಮುಖ ಅಂಶವಾಗಿದೆ.

## ಪರಿಸರದ ಒತ್ತಡ

ಬಬೆಬಿ ಸುಳಿಯ ಮೂರನೆಯ ಅಂಶ- ಬಿಗಡಾಯಿಸುತ್ತಿರುವ ಪರಿಸರಕ್ಕೆ ಸಂಭಂಧಪಟ್ಟಿದ್ದು, ಇದು ಸಹ ಬೆಳೆಯುತ್ತಿರುವ ಜನಸಂಖ್ಯೆಯ ಫಲವಾಗಿದೆ- ತೀವ್ರ ಸ್ವರೂಪವಾಗಿದೆ. ಹೆಚ್ಚುತ್ತಿರುವ ಜನಸಂಖ್ಯೆಯ ಅಗತ್ಯ-ಅವಶ್ಯಕತೆಗಳನ್ನು ಈಡೇರಿಸಲು ಭೂಮಿ ಸಾಲದೆ ಹೋಗಿ, ಬದಲಿ ಉದ್ಯೋಗಾವ ಕಾಶಗಳು ಸಹ ಇಲ್ಲದಂತಾದಾಗ, ಪರಿಸರದ ಮೇಲೆ ಅದರ ಒತ್ತಡ ಬಿದ್ದೇ ಬೀಳುತ್ತದೆ. ಹಾಗೆಂದ ಮಾತ್ರಕ್ಕೆ, ಪರಿಸರದ ಮೇಲಣ ಒತ್ತಡ ಹೆಚ್ಚಿರುವುದಕ್ಕೆ, ಹೆಚ್ಚುತ್ತಿರುವ ಜನ ಸಂಖ್ಯೆಯೊಂದೇ ಕಾರಣವೆಂದು ಭಾವಿಸುವುದು ತಪ್ಪಾಗುತ್ತದೆ. ಫಲವತ್ತಾದ ಜಮೀನು, ಸಿರಿವಂತರಾದ ಕೆಲವೇ ಕೆಲವು ಜನರು ಮತ್ತು ದೊಡ್ಡ ದೊಡ್ಡ ನಿಗಮಗಳ ವಶದಲ್ಲಿರುವುದು, ಮತ್ತು ಕಿರಿಯ ಹಾಗೂ ಮಧ್ಯಮ ಪ್ರಮಾಣದ ಕೃಷಿ ಕ್ಷೇತ್ರಗಳಲ್ಲಿ ಹೆಚ್ಚಿನ ಕಾರ್ಮಿಕರನ್ನು ನೇಮಿಸಿಕೊಳ್ಳಲು ಬರುವಂತಹ ರೀತಿ-ನೀತಿಗಳನ್ನು ಅನುಸರಿಸದೇ ಇರುವುದು ಸಹ, ಪರಿಸರದ ಮೇಲಿನ ಒತ್ತಡ ಹೆಚ್ಚುವುದಕ್ಕೆ ಕಾರಣವಾಗಿವೆ. ಈ ಆಂತರಿಕ ಸಮಸ್ಯೆಗಳಷ್ಟೇ ಅಲ್ಲದೆ, ವಿದೇಶಗಳ ಪ್ರತಿಬಂಧಾತ್ಮಕ ನೀತಿಗಳು, ಈ ಸಮಸ್ಯೆಯನ್ನು ಉಲ್ಬಣಗೊಳಿಸಿವೆ. ಕೈಗಾರಿಕಾ ಕ್ಷೇತ್ರದಲ್ಲಿ ಮುಂದುವರಿದ ದೇಶಗಳು ತಮ್ಮ ಅಭಿವೃದ್ಧಿಯ ಹಂತದಲ್ಲಿ ತಾವು ಉತ್ಪಾದಿಸಿದ ವಸ್ತುಗಳನ್ನು- ಜನರನ್ನು ರಫ್ತು ಮಾಡುವ ಅವಕಾಶ ಪಡೆದಿದ್ದವು. ಆದರೆ, ಈಗಿನ ಅಭಿವೃದ್ಧಿಶೀಲಗಳಿಗೆ, ತಾವು ಉತ್ಪಾದಿಸಿದ ವಸ್ತುಗಳನ್ನು ರಫ್ತು ಮಾಡುವ ಅವಕಾಶ ಸ್ವಾತಂತ್ರ್ಯ ಇಲ್ಲವಾಗಿದೆ.





ಈ ಎಲ್ಲಾ ಕಾರಣಗಳಿಂದಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಭೂರಹಿತ ಜನರು ಮತ್ತು ನಿರುದ್ಯೋಗಿಗಳು, ತಮ್ಮ ತಮ್ಮ ದೇಶಗಳಲ್ಲೇ, ಸ್ಥಳದಿಂದ-ಸ್ಥಳಕ್ಕೆ ವಲಸೆಹೋಗುವುದು ಹೆಚ್ಚಾಗತೊಡಗಿದೆ. ನೆಲೆಯಿಲ್ಲದ ಈ ಜನರು, ಜೀವನದ ಸೆಲೆ ಹುಡುಕಿಕೊಂಡು, ಸಾಗುವಳಿ ಮಾಡದೇ ಇರುವ ಬೆಟ್ಟಗಳ ಇಳಿಜಾರು ಪ್ರದೇಶಗಳಲ್ಲಿ, ಅರಣ್ಯಗಳ ಅಂಚಿನಲ್ಲಿ, ಅಷ್ಟೊಂದು ಫಲವತ್ತಾಗಿರದ ಜಮೀನುಗಳಲ್ಲಿ ಮತ್ತು ಮರಳುಗಾಡಿನ ಅಂಚಿನಲ್ಲಿ ಜೀವಿಸಲು ಹೋಗುತ್ತಿದ್ದಾರೆ, ಇಲ್ಲವೆ, ನಗರಗಳಲ್ಲಿನ ಕೊಳಚೆ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ನೆಲೆ ಇಲ್ಲದ ಈ ಜನರು, ಉತ್ತುಬೆಳೆದ ಜಮೀನನ್ನು ಸ್ವಲ್ಪ ಅವಧಿಗಾಗಿಯಾದರೂ ಹಾಗೆಯೇ ಬಿಡುವುದಿಲ್ಲವಾದ್ದರಿಂದ ಮತ್ತು ಸಾಗುವಳಿಗೆ ಬೇಕಾದ ರಸಗೊಬ್ಬರ ಕೊಂಡು ಹಾಕಲು ಅಸಮರ್ಥರಾಗಿದ್ದರಿಂದ, ಜಮೀನಿನ ಇದ್ದ-ಬಿದ್ದ ಫಲವತ್ತತೆಯು ಸಹ ಹಾಳಾಗಿ ಹೋಗುತ್ತಿದೆ. ಮರಳುಗಾಡಿನ ಅಂಚಿನಲ್ಲಿರುವ ಜಮೀನಿನಲ್ಲಿನ ಮರಗಳನ್ನು ಕಡಿದು, ದನಕರುಗಳನ್ನು ಸ್ವೇಚ್ಛೆಯಾಗಿ ಮೇಯಲು ಬಿಡಲಾಗುತ್ತಿದ್ದರಿಂದ, ಮರಳುಗಾಡು ಹೊಸಕ್ಷೇತ್ರಗಳಿಗೆ ವ್ಯಾಪಿಸಿಕೊಳ್ಳುತ್ತಿದೆ. ಇದೇ ಸಮಯದಲ್ಲಿ, ನಗರದ ಕೊಳಚೆ ಪ್ರದೇಶಗಳಿಗೆ ವಲಸೆಹೋಗಿರುವ ಲಕ್ಷಾಂತರ ಜನರು, ಸಾಮಾನ್ಯವಾಗಿ ಕೊಳಕು ತುಂಬಿದ ಪರಿಸರದಲ್ಲಿ, ಹತಾಶ ಜೀವನ ನಡೆಸುತ್ತಿದ್ದಾರೆ.

ಈ ರೀತಿ, ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ, ಹೆಚ್ಚು ಹೆಚ್ಚು ಜನರು, ಪರಿಸರದ ಸ್ಥಿತಿಗತಿಗಳು ಸೂಕ್ಷ್ಮವಾಗಿರುವ ಪ್ರದೇಶಗಲ್ಲಿ ವಾಸಿಸುವುದು ಅನಿವಾರ್ಯವಾಗತೊಡಗಿದೆ. ಈ ಅನಿವಾರ್ಯತೆಯಿಂದ, ಪರಿಸರದ ಮೇಲೆ ಹೆಚ್ಚಿನ ಒತ್ತಡ ಬಿದ್ದು, ಅದು ಬಡತನಕ್ಕೆ ಎಡೆ ಮಾಡಿಕೊಡುತ್ತಿದೆ. ಅಂತಲೇ, ಪರಿಸರದ ಮೇಲಿನ ಒತ್ತಡ, ಬಬೆಬಿ-ಸುಳಿಯ ಇನ್ನೂ ಒಂದು ಕೊಂಡಿಯಾಗಿ ಹೊರಹೊಮ್ಮಿದೆ.

ಬಬೆಬಿ-ಸುಳಿಯ ಈ ಅಂಶ, ಬಡತನ ಮತ್ತು ಹದಗೆಡುತ್ತಿರುವ ಪರಿಸರದ ಭಾರ-ಒತ್ತಡ, ಬಹುಪಾಲು ಮಹಿಳೆಯರ ಮೇಲೆ ಬೀಳುತ್ತಿದೆ. ಮನೆಯ ಒಲೆ ಹೊತ್ತಿಸಲು ಬೇಕಾದ ಉರವಲು-ಕಟ್ಟಿಗೆ ತರಲು ದೂರ ದೂರ ಹೋಗುವುದು ಮಹಿಳೆಯರು, ಮತ್ತು, ಕುಟುಂಬದ ಇತರ ಅವಶ್ಯಕತೆಗಳನ್ನು ಈಡೇರಿಸಲು ಪ್ರಯತ್ನಿಸುವುದು ಸಹ ಮಹಿಳೆಯರೇ ಆಗಿದ್ದಾರೆ. ನೀರಿನ ಪೂರೈಕೆ ಅಸಮರ್ಪಕವಾಗಿರುವುದರಿಂದ, ದೂರದ ಸ್ಥಳಕ್ಕೆ ಹೋಗಿ ನೀರು ತರುವುದು ಸಹ ಅವರೇ ಆಗಿದ್ದಾರೆ. ಇದು ಸಾಲದು-ಎಂಬಂತೆ, ತನ್ನ ಸಾರ ಸತ್ತ್ವ, ಫಲವತ್ತತೆಯನ್ನು ಕಳೆದುಕೊಂಡ ಜಮೀನಿನಲ್ಲಿ ಅಲ್ಪ ಇಳುವರಿಗಾಗಿ ಹಗಲಿರುಳು ದುಡಿಯುವುದು- ಮಹಿಳೆಯರೇ ಆಗಿದ್ದರಿಂದ, ಪರಿಸರದ ಮೇಲಿನ ಒತ್ತಡ, ಪರೋಕ್ಷವಾಗಿ ಅವರ ಮೇಲೆಯೂ ಬೀಳುತ್ತಿದೆ.

## ಪರಿಣಾಮಗಳು

ಬಬೆಬಿ-ಸುಳಿಯ ಈ ಸಮಸ್ಯೆ 21 ನೆಯ ಶತಮಾನದಲ್ಲೂ ಹೀಗೆಯೇ ಮುಂದುವರಿದಲ್ಲಿ, ಅವುಗಳ ದಾರುಣ ಪರಿಣಾಮಗಳನ್ನು ಅನುಭವಿಸುವುದು, ವಿಶ್ವದ ಕೋಟ್ಯಾಂತರ ಬಡಜನರು-ಎಂಬುದನ್ನು ಮರೆಯಲಾಗದು. ಆದ್ದರಿಂದ, ವಿಶ್ವದ ಉಳಿದ ಜನರು ಈ ಸಮಸ್ಯೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡುವುದು, ಅವರ ಸ್ವಂತ ಹಿತಾಸಕ್ತಿಗಳ ದೃಷ್ಟಿಯಿಂದ ಅಷ್ಟೇ ಅಲ್ಲದೆ, ಮಾನವೀಯ ಅನುಕಂಪ ಕಳವಳದ ದೃಷ್ಟಿಯಿಂದಲೂ ಅಗತ್ಯವಾಗಿದೆ.

ಬಬೆಬಿ-ಸುಳಿಯ ತೀವ್ರ ಪರಿಣಾಮಗಳು, ಅಷ್ಟೊಂದು ಬಡವರಲ್ಲದ, ಮತ್ತು, ಅಭಿವೃದ್ಧಿಶೀಲ ದೇಶಗಳಲ್ಲಿನ ಹೆಚ್ಚು ಫಲವತ್ತಾದ ಪ್ರದೇಶಗಳಲ್ಲಿ ಜೀವಿಸುತ್ತಿರುವ ಜನರಿಗು ಸಹ ಅನ್ವಯಿಸುತ್ತವೆ. ಇಳಿಜಾರು ಪ್ರದೇಶಗಳಲ್ಲಿ ಮತ್ತು ಮರ-ಗಿಡಗಳನ್ನು ಕಡಿದು ಹಾಕಿದ್ದರಿಂದ ಬೋಳಾಗಿರುವ ಬೆಟ್ಟ ಪ್ರದೇಶಗಳಲ್ಲಿ ಸುರಿದ ಮಳೆಯ ನೀರಿನ ಜೊತೆಗೆ, ಆ ಪ್ರದೇಶಗಳಲ್ಲಿನ-ಜಮೀನಿನ ಸಾರ ಸತ್ತ್ವ-ಫಲವತ್ತತೆ ಕೊಚ್ಚಿಕೊಂಡು ಹೋಗುತ್ತದೆ. ಬಯಲು ಪ್ರದೇಶದಲ್ಲಿ ಬರುವ ಮಹಾಪೂರ, ಮತ್ತು ನದಿಗಳ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದ ಮಣ್ಣು, ಕಾಲುವೆ- ಅಣೆಕಟ್ಟೆಗಳಲ್ಲಿ ಸೇರಿಕೊಂಡು, ತೊಡಗಿಸಿದ ಬಂಡವಾಳ ನಿರರ್ಥಕವಾಗಿ, ಮಹಾಪೂರಗಳ ಪ್ರಕೋಪ ಮಾತ್ರ ಹೆಚ್ಚ ತೊಡಗಿದೆ. ಈ ಎಲ್ಲಾ ಕಾರಣಗಳಿಂದಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿನ ಹೆಚ್ಚು ಫಲವತ್ತಾದ ಜಮೀನಿನ ಸಾಗುವಳಿ ಮಾಡುತ್ತಿರುವ ಸುಮಾರು 40 ಕೋಟಿ ಜನರ ಜೀವನೋಪಾಯಕ್ಕು ಸಹ ಬೆದರಿಕೆ ತಲೆದೋರಿದೆ.

ಎರಡನೆಯದಾಗಿ, ಅಂಚಿನಲ್ಲಿನ ಜಮೀನುಗಳ ಮೇಲಣ ಒತ್ತಡ, ವಿಶೇಷವಾಗಿ ಉಷ್ಣವಲಯದ ಅರಣ್ಯಗಳ ಅಂಚಿನಲ್ಲಿನ ಪ್ರದೇಶಗಳ ಮೇಲಣ ಒತ್ತಡ, ಕೈಗಾರಿಕಾ ಕ್ಷೇತ್ರದಲ್ಲಿ

ಮುಂದುವರಿದ ದೇಶಗಳ ಜನರು ಸೇರಿದಂತೆ, ಎಲ್ಲರಿಗೂ ಅಪಾಯಕಾರಿಯಾಗಿದೆ. ಈ ಒತ್ತಡದಿಂದಾಗಿಯೇ, ಸಸ್ಯಾನಿಲಗಳ ಪ್ರಮಾಣ ಹೆಚ್ಚುತ್ತಿದ್ದು, ಜೈವಿಕ ವೈವಿಧ್ಯತೆ ತೀವ್ರಗತಿಯಲ್ಲಿ ಕುಗ್ಗಿ-ನಶಿಸಿ ಹೋಗುತ್ತಿದೆ.

ವಿಶ್ವವ್ಯಾಪಿಯಾದ ಪರಿಸರದ ಮೇಲಣ ಪರಿಣಾಮಗಳು ಅಷ್ಟೇ ಅಲ್ಲದೆ, ಬಬೆಬಿ-ಯ ಸಮಸ್ಯೆಗಳು, ರಾಜಕೀಯ ಅಸ್ಥಿರತೆಗು ಸಹ ಕಾರಣವಾಗಿದೆ. ಈ ಸಮಸ್ಯೆಗಳ ಪ್ರಹಾರಕ್ಕೆ ಒಳಗಾಗಿ, ಪ್ರಜಾಸತ್ತೆ, ಮತ್ತು ಕಾನೂನು ಹಾಗೂ ಶಿಸ್ತಿನ ವ್ಯವಸ್ಥೆಯತ್ತ ಪ್ರಗತಿ ಸಾಧಿಸುವುದಕ್ಕೆ ಅಡ್ಡಿ-ಆತಂಕಗಳು ಉದ್ಭವಿಸತೊಡಗಿವೆ. ನಿರಂಕುಶಾಧಿಕಾರದಿಂದ ಮುಕ್ತಿ ಪಡೆದು ಪ್ರಜಾಸತ್ತಾತ್ಮಕ ವ್ಯವಸ್ಥೆಯತ್ತ ದಾಪುಗಾಲು ಹಾಕುವ ಹುಮ್ಮಸ್ಸು, ವಿಶ್ವಾಸ ಈಗ ಅದೆಷ್ಟೋ ಲಕ್ಷ ಜನರ ಮನಸ್ಸಿನಲ್ಲಿ ಜಾಗೃತಗೊಂಡಿದೆ. ಆದರೆ, ಬಬೆಬಿ-ಯ ಸಮಸ್ಯೆಗಳಿಂದಾಗಿ, ಆ ಹುಮ್ಮಸ್ಸು, ವಿಶ್ವಾಸ ಅಳಿದುಹೋದಲ್ಲಿ, ಆರ್ಥಿಕ ಕ್ಷೇತ್ರಗಳಲ್ಲಿ ಹತಾಶ ಪರಿಸ್ಥಿತಿಗಳು ತಲೆದೋರಿ, ಆಂತರಿಕ ವಲಸೆಗೆ, ಸಾಮಾಜಿಕ ವಿಭಜನೆಗೆ, ರಾಜಕೀಯ ಗೊಂದಲ ಮತ್ತು ಹಿಂಸಾತ್ಮಕ ಘರ್ಷಣೆ ಗಳಿಗೆ ನಾಂದಿಯಾಗಬಹುದು- ಎಂಬುದನ್ನು ನಾವು ಮರೆಯಬಾರದು.

ಒಂದುಕ್ಕೊಂದು ಪೂರಕವಾದ, ಒಂದಕ್ಕೊಂದು ಸಂಬಂಧ ಪಡೆದ ಈ ಎಲ್ಲಾ ಸಮಸ್ಯೆಗಳಿಂದಾಗಿ, ಬಡತನ ಮತ್ತು ಅಸ್ಥಿರತೆಯ ನಡುವಣ ಕೊಂಡಿ ಬಿಗಿಯಾಗಿ, ನಿರಂತರವಾಗಿ ಉಳಿದುಕೊಳ್ಳಬಹುದು. ಆಗ, ಅಂತರರಾಷ್ಟ್ರೀಯ ಮಟ್ಟದಲ್ಲು ಸಹ, ಶಾಂತಿ ಮತ್ತು ಸುಭದ್ರತೆಯ ಮೇಲೆ, ತೀವ್ರ ಪರಿಣಾಮಗಳು ತಲೆದೋರಬಹುದು. ಹಲವೊಂದು ಪ್ರಕರಣಗಳಲ್ಲಿ, ತೀವ್ರ ಸಂದರ್ಭಗಳಲ್ಲಿ, ಅಥವಾ, ಶಿಸ್ತು ಭಂಗಗೊಂಡಿರುವ ದೇಶ ಗಳಲ್ಲಿ, ಜನ ಸಾಮಾನ್ಯರ ಹಿತಾಸಕ್ತಿಗಳನ್ನು ರಕ್ಷಿಸಲು, ಅಂತರರಾಷ್ಟ್ರೀಯ ಮಟ್ಟದಲ್ಲಿ ಕ್ರಮಕೈಗೊಳ್ಳುವುದು ಅನಿವಾರ್ಯವಾಗಬಹುದು. ಇನ್ನಿತರ ಸಂದರ್ಭಗಳು ಮತ್ತು ಪ್ರಕರಣಗಳಲ್ಲಿ, ಬಡಜನರ ಹತಾಶ ಪರಿಸ್ಥಿತಿಗಳ ಲಾಭಪಡೆದು ಅಧಿಕಾರಕ್ಕೆ ಬಂದ, ನಿರಂಕುಶ ಆಡಳಿತ ವ್ಯವಸ್ಥೆಗಳ ವಿರುದ್ಧ, ಅಂತರರಾಷ್ಟ್ರೀಯ ಮಟ್ಟದಲ್ಲಿ ಹೋರಾಡುವುದು ಅಗತ್ಯವಾಗಬಹುದು. ಅಂತಹ ಸಂದರ್ಭ-ಪರಿಸ್ಥಿತಿಗಳನ್ನು ಎದುರಿಸಲು ತಗಲುವ ವೆಚ್ಚ ಸಾಕಷ್ಟು ಹೆಚ್ಚಾಗಿದ್ದು, ಮುಂಬರುವ ವರ್ಷಗಳಲ್ಲಿ, ಅದು ಇನ್ನೂ ಹೆಚ್ಚಾಗುವ ಸಾಧ್ಯತೆಗಳಿವೆ.

ಬಬೆಬಿ-ಯ ಸಮಸ್ಯೆಗಳು ತೀವ್ರಗೊಂಡಲ್ಲಿ, ತಾವಿರುವ ನಾಡಿನಲ್ಲಿನ ಸೀಮಿತ ಅವಕಾಶಗಳಿಂದ, ಹತಾಶ ಪರಿಸ್ಥಿತಿಗಳಿಂದ ರೋಸಿಹೋದ ಜನರು, ಸಕ್ರಮವಾಗಿ ಇಲ್ಲದೆ ಅಕ್ರಮವಾಗಿ, ಬೇರೆ ದೇಶಗಳಿಗೆ ವಲಸೆ ಹೋಗಲು ತೀವ್ರ ಪ್ರಯತ್ನ ಮಾಡಬಹುದು.

ಕೊನೆಯದಾಗಿ, ಬಡತನ ಮತ್ತು ಹತಾಶ ಪರಿಸ್ಥಿತಿಗಳಿಂದಾಗಿ ಕಂಗೆಟ್ಟ ಜನರು, ಭಯೋತ್ಪಾದನೆ ಇಲ್ಲವೆ ಮಾದಕ ವಸ್ತುಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿ, ಅಂತರರಾಷ್ಟ್ರೀಯ ಗಡಿಗಳನ್ನು ದಾಟಿ, ದಂಗೆ ಏಳಬಹುದಾಗಿದೆ.

## ಪ್ರತಿಕ್ರಿಯೆ

ಬಬೆಬಿ-ಯ ಈ ಸವಾಲನ್ನು ಎದುರಿಸಲು, ರಾಷ್ಟ್ರೀಯ ಮಟ್ಟದಲ್ಲಿ ಸೂಕ್ತ ಕ್ರಮ ಕೈಗೊಂಡು, ಅಂತರರಾಷ್ಟ್ರೀಯ ಮಟ್ಟದಲ್ಲಿ ಸಹಕಾರ ಏರ್ಪಡಿಸಿಕೊಳ್ಳುವುದು ಅಗತ್ಯವಾಗಿದೆ. ಅಂತರರಾಷ್ಟ್ರೀಯ ವ್ಯಾಪಾರ ವ್ಯವಹಾರಗಳಲ್ಲಿ, ಕಾರ್ಮಿಕರಿಗೆ ಪ್ರಾಧಾನ್ಯತೆ ನೀಡಿ, ರೂಪಿಸಿ-ಜಾರಿಗೆತರಲಾಗುವ ರಾಷ್ಟ್ರೀಯ ಅಭಿವೃದ್ಧಿ ನೀತಿಗಳ ವಿಷಯದಲ್ಲಿ, ಸಾಲಗಳನ್ನು ಮನ್ನಾ ಮಾಡುವ ವಿಷಯದಲ್ಲಿ, ಅಭಿವೃದ್ಧಿಶೀಲ ದೇಶಗಳಲ್ಲಿ ಹೆಚ್ಚಿನ ಬಂಡವಾಳ ತೊಡಗಿಸಿ, ಅವುಗಳಿಗೆ ಹೆಚ್ಚಿನ ಹಣ ದಕ್ಕುವಂತೆ ಮಾಡುವ ವಿಷಯದಲ್ಲಿ, ಪರಿಸರಕ್ಕೆ ಸಂಬಂಧಪಟ್ಟ ಒಪ್ಪಂದ ಗಳಲ್ಲಿ, ವೈಜ್ಞಾನಿಕ ಕ್ಷೇತ್ರದಲ್ಲಿನ ಸಹಕಾರ ಮತ್ತು ತಾಂತ್ರಿಕ ಪರಿಜ್ಞಾನದ ವರ್ಗಾವಣೆಯ ವಿಷಯದಲ್ಲಿ, ಹಾಗೂ ಕೈಗಾರಿಕಾ ದೇಶಗಳಲ್ಲಿ ಪ್ರಗತಿಯ ವಿಧಿ-ವಿಧಾನಗಳಲ್ಲಿ ಪರಿಸರದ ರಕ್ಷಣೆಗೆ ಪೂರಕವಾದ ಅಂಶಗಳನ್ನು ಅಳವಡಿಸುವ ವಿಷಯದಲ್ಲಿ- ಅಂತರ ರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚಿನ ಸಹಕಾರ ಏರ್ಪಾಡುವುದು ಅಗತ್ಯವಾಗಿದೆ.

ಇದೇ ಸಮಯದಲ್ಲಿ, ಬಬೆಬಿ-ಯ ಸಮಸ್ಯೆಗಳನ್ನು ಪರಿಹರಿಸುವುದಕ್ಕಾಗಿ, ಈ ಮುಂಚೆ ಪ್ರಸ್ತಾಪಿಸಲಾಗಿರುವ ಮಾನವೀಯ ಧ್ಯೇಯೋದ್ದೇಶಗಳನ್ನು, ಗುರಿಗಳನ್ನು ತಲಪುವುದು ಅಗತ್ಯವೆಂಬುದು ಸುಸ್ಪಷ್ಟವಾಗಿದೆ. ಆದ್ದರಿಂದ, ಆರೋಗ್ಯ, ಶಿಕ್ಷಣ ಮತ್ತು ಕುಟುಂಬ ಯೋಜನೆಯ ಕಾರ್ಯಕ್ರಮಗಳಲ್ಲಿ ತೊಡಗಿಸಲಾಗುವ ಬಂಡವಾಳ, ಜನಸಂಖ್ಯೆಯನ್ನು ಸ್ಥಿರವಾಗಿಟ್ಟು, ಪರಿಸರದ ಮೇಲಣ ಒತ್ತಡ ತಗ್ಗಿಸಿ, ಆರ್ಥಿಕ

ಪ್ರಗತಿಯನ್ನು ಸಾಧಿಸುವುದಕ್ಕೆ, ಒಂದು ಪ್ರಬಲ ಅಸ್ತ್ರ-ಸಾಧನವಾಗಬಹುದು-ಎಂಬುದು ಸಹ, ಈಗ ಸ್ಪಷ್ಟವಾಗಿದೆ.

ಆರೋಗ್ಯ ಮತ್ತು ಪೋಷಣೆಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ತೊಡಗಿಸಲಾಗುವ ಬಂಡವಾಳ, ಆರ್ಥಿಕ ಉತ್ಪಾದಕತೆಗೆ ಮೂಲ ಕೊಡುಗೆಯಾಗಿ ಪರಿಣಮಿಸುತ್ತದೆ. ಆರೋಗ್ಯ ಆರೈಕೆ ಮತ್ತು ಪೋಷಣೆಯ ಕಾರ್ಯಕ್ರಮಗಳಿಂದಾಗಿ, ತಮ್ಮ ಮಕ್ಕಳು ಬದುಕಿ ಉಳಿಯಬಲ್ಲರೆಂಬ ವಿಶ್ವಾಸ ಜನರಲ್ಲಿ ಮೂಡಿ, ಅವರು, ಕುಟುಂಬ ಯೋಜನೆಯ ವಿಧಾನಗಳನ್ನು ಅರಿತು ಅಂಗೀಕರಿಸಲು ಮುಂದಾಗುವಂತೆ ಮಾಡಬಹುದು. ಅದರಿಂದ, ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ಸಹ ಹತ್ತಿಕ್ಕಬಹುದು.

ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಲಾಗುವ ಬಂಡವಾಳದಿಂದ, ಆರ್ಥಿಕ ಉತ್ಪಾದಕತೆ ಹೆಚ್ಚುವುದರ ಜೊತೆಗೆ, ಜನಸಂಖ್ಯೆಯ ಬೆಳವಣಿಗೆಯ ಗತಿ ನಿಧಾನವಾಗಬಹುದು. ಹುಡುಗಿಯರಿಗೆ ಶಿಕ್ಷಣ ನೀಡಿದಲ್ಲಿ, ಜನನ ಗತಿ ಕಡಿಮೆಯಾಗುತ್ತದೆಂಬುದು ಈಗಾಗಲೇ ವಿದಿತವಾಗಿರುವುದು ಗಮನಾರ್ಹವಾಗಿದೆ.

ಸಾರ್ವತ್ರಿಕವಾಗಿ, ಮೂಲ ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವುದು, ಬಬೆಬಿ-ಯ ಸಮಸ್ಯೆಗಳಲ್ಲಿನ ಪರಿಸರದ ಆಯಾಮವನ್ನು ಎದುರಿಸುವ ಒಂದು ಸಾಧನವಾಗಿದೆ. ಮುಂಬರುವ ವರ್ಷಗಳಲ್ಲಿ, ತರಬೇತಿ, ಮರು-ತರಬೇತಿ ಹೊಸ ವೈಜ್ಞಾನಿಕ ಪರಿಜ್ಞಾನದ ಪ್ರಸಾರಣ, ಹೊಸ ರೀತಿಯ ಸಾಗುವಳಿ, ಹೊಸ ತಳಿಯ ಸಸ್ಯಗಳ ಅಂಕುರ, ಹೊಸ ವಿಷಯಗಳನ್ನು ಅರಿತು ಅಂಗೀಕರಿಸುವ ಜನ, ಹೊಸ ಅಪಾಯಗಳು ಮತ್ತು ಹೊಸ ಅವಕಾಶಗಳು- ಬಲವಾಗಿ ಏರ್ಪಡಲಿವೆ. ಅದಕ್ಕಾಗಿ. ಶಿಕ್ಷಣ-ವಿದ್ಯೆ, ಈಗ ಅತಿ ಮುಖ್ಯವಾಗಿದೆ.

ಕುಟುಂಬ ಯೋಜನಾ ಕಾರ್ಯಕ್ರಮಗಳಲ್ಲಿ ತೊಡಗಿಸಲಾಗುವ ಬಂಡವಾಳ, ಆರ್ಥಿಕ ಅಭಿವೃದ್ಧಿಗೆ, ಜನಸಂಖ್ಯೆಯ ಬೆಳವಣಿಗೆಯನ್ನು ಹತ್ತಿಕ್ಕಿ-ಸ್ಥಿರಗೊಳಿಸುವುದಕ್ಕೆ ಮತ್ತು ಪರಿಸರದ ಮೇಲಣ ಒತ್ತಡವನ್ನು ತಗ್ಗಿಸುವುದಕ್ಕೆ ಪೂರಕವಾಗಿರುತ್ತದೆ. ಕುಟುಂಬ ಯೋಜನೆಯ ಕ್ಷೇತ್ರದಲ್ಲಿ, ಏನೆಲ್ಲಾ ಪ್ರಗತಿ ಸಾಧಿಸಿದ್ದರು ಸಹ, ಬಹುತೇಕ ಅಭಿವೃದ್ಧಿಶೀಲ ದೇಶಗಳಲ್ಲಿ ಕುಟುಂಬ ಯೋಜನೆಯ ಸಾಧನಗಳಿಗಾಗಿರುವ ಬೇಡಿಕೆಯನ್ನು ಈಡೇರಿಸಲು ಇದುವರೆಗೆ ಸಾಧ್ಯವಾಗಿಲ್ಲ. ಇದರ ಪರಿಣಾಮವಾಗಿ, ಅಭಿವೃದ್ಧಿಶೀಲ ದೇಶಗಳಲ್ಲಿ ಪ್ರತೀ ಐದು ಗರ್ಭಗಳಲ್ಲಿ, ಒಂದು, ಅನಗತ್ಯವಾಗಿರುತ್ತದೆ- ಬೇಡವಾಗಿರುತ್ತದೆ.

## ಉನ್ನತಿಯ ಸುಳಿ

ಬಬೆಬಿ-ಯ ಸುಳಿಯಲ್ಲಿನ ಅಂಶಗಳಲ್ಲಿ ವಿನಾಶಕಾರಿ ಪ್ರವೃತ್ತಿಗಳ ಸರಪಳಿ-ಕೊಂಡಿ ಇದ್ದಂತೆ, ಆರೋಗ್ಯ, ಪೋಷಣೆ, ಶಿಕ್ಷಣ ಮತ್ತು ಕುಟುಂಬ ಯೋಜನೆಯ ವಿಷಯಗಳಲ್ಲಿ, ರಚನಾತ್ಮಕವಾದ ಒಂದು ಸಂಬಂಧ-ಕೊಂಡಿ ಇದೆ. ಬಬೆಬಿ-ಯ ಸಮಸ್ಯೆಗಳಿಗೆ ಪರಿಹಾರ, ಇವುಗಳ ಸಂಬಂಧದಲ್ಲಿ ಅಡಗಿದೆ. ಉದಾಹರಣೆಗೆ :

- ಕುಟುಂಬ ಯೋಜನೆಯಿಂದ, ಐದು ವರ್ಷಗಳಿಗು ಕಡಿಮೆ ವಯಸ್ಸಿನ ಮಕ್ಕಳ ಸಾವಿನ ಪ್ರಮಾಣ ತಗ್ಗಿದೆ. ಇದರ ಫಲವಾಗಿ, ಕುಟುಂಬ ಯೋಜನೆಯ ವಿಧಾನ-ಸಾಧನಗಳಿಗೆ ಬೇಡಿಕೆ ಹೆಚ್ಚಿರುವುದು ಕಂಡುಬಂದಿದೆ.
- ಶಿಕ್ಷಣ ಪಡೆದ ಜನರಿಂದಾಗಿ-ವಿಶೇಷವಾಗಿ ಸುಶಿಕ್ಷಿತ ಮಹಿಳೆಯರಿಂದಾಗಿ, ಕುಟುಂಬದ ಗಾತ್ರ ಕಡಿಮೆಯಾಗತೊಡಗಿದೆ. ಅದರ ಪರಿಣಾಮವಾಗಿ, ಕುಟುಂಬದ ಸದಸ್ಯರು, ಸುಶಿಕ್ಷಿತವಾಗಿ, ಹೆಚ್ಚು ಆರೋಗ್ಯದಿಂದಿರುವುದು ಕಂಡುಬಂದಿದೆ.

ಈ ಸಾಧನೆಗಳಿಂದ, ಮತ್ತು, ಮಾನವನ ಮೂಲ ಅವಶ್ಯಕತೆಗಳನ್ನು ಈಡೇರಿಸುವ ಗುರಿಯನ್ನು ತಲುಪಲು ಈಗ ನಡೆಸಲಾಗುತ್ತಿರುವ ಪ್ರಯತ್ನಗಳಿಂದ, ಅವನತಿಯ ಸುಳಿಯನ್ನು ಹತ್ತಿಕ್ಕಿ, ಉನ್ನತಿಯ ಸುಳಿಯನ್ನು ಮೇಲೆತ್ತಲು ಸಾಧ್ಯವೆಂಬ ವಿಶ್ವಾಸ, ಇದೀಗ ಮೂಡಿದೆ. ಅಂತಲೇ, ಮೂಲ ಅವಶ್ಯಕತೆಗಳನ್ನು ಈಡೇರಿಸಲು ಇಟ್ಟುಕೊಳ್ಳಲಾಗಿರುವ ಗುರಿಗೆ ಪೂರಕವವಾದ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಬಂಡವಾಳ ತೊಡಗಿಸಿ, ಹೆಚ್ಚಿನ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಟ್ಟಲ್ಲಿ, ಬಬೆಬಿ-ಯ ಸುಳಿಯನ್ನು ಹತ್ತಿಕ್ಕುವವುದು ಸುಲಭ ಸಾಧ್ಯವೆಂದು ನಂಬಲಾಗಿದೆ.

ಪರಸ್ಪರ ಪೂರಕವಾದ ಈ ಎಲ್ಲಾ ಕ್ರಮಗಳ ಸಮಷ್ಟಿ ಪರಿಣಾಮ, ಜನಸಂಖ್ಯೆಯ ಬೆಳವಣಿಗೆಯ ಮೇಲಾಗುವುದು ಖಂಡಿತವಾಗಿದೆ. ಆರೋಗ್ಯ, ಪೋಷಣೆ, ಶಿಕ್ಷಣ ಮತ್ತು ಕುಟುಂಬ ಯೋಜನೆಯ ಗುರಿಗಳನ್ನು ತಲುಪಲು ತೊಡಗಿಸಲಾಗುವ

ಬಂಡವಾಳದ ಮೇಲೆ, ಈಗ್ಗೆ ಒಂದು ಶತಮಾನದ ನಂತರ, ವಿಶ್ವದ ಜನಸಂಖ್ಯೆ ಒಂದುಸಾವಿರ ಕೋಟಿಯಾಗಿರುತ್ತದೊ, ಅಥವಾ, ಈಗ್ಗೆ 50 ವರ್ಷಗಳ ನಂತರ 2 ಸಾವಿರ ಕೋಟಿಯಾಗಿರುತ್ತದೊ ಎಂಬುದು ಆಧಾರಗೊಂಡಿದೆ. ಜನಸಂಖ್ಯೆಯ-1993-ರಲ್ಲಿನ ವಿಶ್ವದ ಒಟ್ಟಾರೆ ಜನಸಂಖ್ಯೆಯ ಎರಡು ಪಟ್ಟು- ಬೆಳವಣಿಗೆಯಲ್ಲಿನ ಈ ವ್ಯತ್ಯಾಸದ ಮೇಲೆ ಉತ್ತಮ ಭವಿಷ್ಯಕ್ಕಾಗಿ, ನಿರಂತರ ಪ್ರಗತಿಗಾಗಿ ನಾವು ನಡೆಸುತ್ತಿರುವ ಪ್ರಯತ್ನಗಳ ಯಶಸ್ಸು - ವೈಫಲ್ಯ ಆಧಾರಗೊಂಡಿದೆ.

---

**ವಿಶ್ವದ ಮಕ್ಕಳ ಸ್ಥಿತಿಗತಿಗಳ ವರದಿ-1994-ರ ಪೂರ್ಣ ಪಾಠವನ್ನು, ಭಾರತದಲ್ಲಿ, ಯೂನಿಸೆಫ್ ಕಚೇರಿ, 73 ಲೋದಿ ಎಸ್ಟೇಟ್, ಹೊಸದೆಹಲಿ-110003, ಈ ವಿಳಾಸದಿಂದ ಪಡೆಯಬಹುದು.**